TRAVEL PAGE

# ಪ್ರವಾಸ 2015

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ



### ಚಾರೋಧಾಮ್ - ಕಾಶಿ - ಗಯಾ : 19/26 ದಿನಗಳು

May 08

ಹರಿದ್ವಾರ, ಯಮುನೋತ್ರಿ, ಗಂಗೋತ್ರಿ, ಉತ್ತರಕಾಶಿ, ಕೇದಾರ, ತ್ರಿಯುಗಿ (Optional), ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿ, ಋಷಿಕೇಶ್, ನವದೆಹಲಿ, ಅಲಹಾಬಾದ್, ಅಯೋಧ್ಯಾ, ಸಾರಾನಾಥ್, ಗಯಾ, ಬುದ್ದಗಯಾ, ಕಾಶಿ

### ಕಾಶಿ ಗಯಾ ಪ್ರಯಾಗ್ : 12 ದಿನಗಳು

May 22

ಅಲಹಾಬಾದ್, ಅಯೋಧ್ಯಾ, ಸಾರಾನಾಥ್, ಗಯಾ, ಬುದ್ದಗಯಾ, ಕಾಶಿ

### ಅಮರನಾಥ್ - ವೈಷ್ಣವಿ ದೇವಿ : 10(19) ದಿನಗಳು

June 29
July 13

ಅಮರನಾಥ್, ವೈಷ್ಣವಿ ದೇವಿ, ಶ್ರೀನಗರ (ಕುರುಕ್ಷೇತ್ರ, ವಾಘಾ ಬಾರ್ಡರ್, ಅಮೃತ್‌ಸರ್, ದೆಹಲಿ)

### ಕೈಲಾಸ ಪರ್ವತ ಮತ್ತು ಮಾನಸ ಸರೋವರ : 14 ದಿನಗಳು

*Avail* **Rs. 30,000/-** *subsidy**

May June July **2015**



## ಶ್ರೀ ಹನ್ಸಾ ಟ್ರಾವೆಲ್ಸ್

## SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.
☎: (080) 26543891 / 26643276 Mobile : (0) 9341415612 / 9341215612
e-mail : hansaatravels@gmail.com web : www.hansaatravels.com

ಅಕ್ಷರ ಜೋಡಣೆ

ಶ್ರೀರಾಮಕೃಷ್ಣ ಆಶ್ರಮ, ಮೈಸೂರು

ಮುದ್ರಣ

ಮಯೂರ್ ಗ್ರಾಫಿಕ್ಸ್, ಬೆಂಗಳೂರು



E-mail:

vivekaprabha@hotmail.com

kannada.vivekaprabha@gmail.com

Website: vivekaprabha.net

ಫೋನ್ : 9481533505


ಮುಖಪುಟ:

**ವಸಂತ ಸಂಭ್ರಮ**

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


**ಚಂದಾ ವಿವರ**

ಬಿಡಿ ಪ್ರತಿ: ₹ 14

ವಾರ್ಷಿಕ: ₹ 140

ಮೂರು ವರ್ಷ: ₹ 375

ಆಜೀವ (25 ವರ್ಷ): ₹ 3,000

ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ: (ಏರ್‌ಮೇಲ್)

ವಾರ್ಷಿಕ: $ 20; ಮೂರು ವರ್ಷ: $ 60

ಆಜೀವ (25ವರ್ಷ): $ 300

ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-ಎ ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



ಏಪ್ರಿಲ್-2015 ಸಂಪುಟ 16 ಸಂಚಿಕೆ 04




# ವಿವೇಕ ಪ್ರಭ

## ಪರಿವಿಡಿ









ವಸಿಷ್ಠರು ರಾಮಚಂದ್ರನಿಗೆ ತಾವು ಮಾಡುತ್ತಿರುವ ಉಪದೇಶವನ್ನು ಮುಂದುವರೆಸುತ್ತಿದ್ದಾರೆ: ''ರಾಮ, ಸೃಷ್ಟಿಯ ರಹಸ್ಯವನ್ನು ನಾನು ಈಗ ವಿವರಿಸುತ್ತೇನೆ. ಅದೇನು ಗೊತ್ತೆ? ......''





# ಶ್ರೀ ರಾಮಸ್ತವರಾಜ ಸ್ತೋತ್ರದಿಂದ



**ರಾಮಂ ರತ್ನಕರೀಟಕುಂಡಲಯುತಂ ಕೇಯೂರಹಾರಾನ್ವಿತಂ**
**ಸೀತಾಲಂಕೃತವಾಮಭಾಗಮಮಲಂ ಸಿಂಹಾಸನಸ್ಥಂ ವಿಭುಂ।**
**ಸುಗ್ರೀವಾದಿ ಹರೀಶ್ವರೈಃ ಸುರಗಣೈಃ ಸಂಸೇವ್ಯಮಾನಂ ಸದಾ**
**ವಿಶ್ವಾಮಿತ್ರ ಪರಾಶರಾದಿಮುನಿಭಿಃ ಸಂಸ್ತೂಯಮಾನಂ ಭಜೇ॥**

ರತ್ನಕಿರೀಟಕುಂಡಲಗಳಿಂದ ಕೂಡಿರುವ, ತಲೆಯ ಆಭರಣ ಗಳಿಂದಲೂ ಹಾರಗಳಿಂದಲೂ ಅಲಂಕೃತನಾಗಿರುವ, ಸೀತಾ ಮಾತೆಯನ್ನು ತನ್ನ ಎಡಭಾಗದಲ್ಲಿ ಹೊಂದಿರುವ, ಸಿಂಹಾಸನ ದಲ್ಲಿ ಕುಳಿತು ಸುಗ್ರೀವ ಮೊದಲಾದ ಕಪಿಶ್ರೇಷ್ಠರಿಂದಲೂ ದೇವತೆಗಳ ಸಮೂಹದಿಂದಲೂ ಸೇವಿಸಲ್ಪಡುತ್ತಿರುವ, ವಿಶ್ವಾ ಮಿತ್ರ, ಪರಾಶರ ಮೊದಲಾದ ಮುನಿಗಳಿಂದ ಸ್ತೋತ್ರ ಮಾಡ ಲ್ಪಡುತ್ತಿರುವ ಪ್ರಭು ಶ್ರೀರಾಮನನ್ನು ಭಜಿಸುತ್ತೇನೆ.

**ಸಕಲಗುಣನಿಧಾನಂ ಯೋಗಿಭಿಃ ಸ್ತೂಯಮಾನಂ**
**ಭುಜವಿಜಿತಸಮಾನಂ ರಾಕ್ಷಸೇಂದ್ರಾದಿಮಾನಂ**
**ಮಹಿತನೃಪಭಯಾನಂ ಸೀತಯಾಶೋಭಮಾನಂ**
**ಸ್ಮರ ಹೃದಯ ವಿಮಾನಂ ಬ್ರಹ್ಮ ರಾಮಾಭಿಧಾನಂ॥**

ಸಕಲಗುಣಗಳಿಗೆ ಆಧಾರಭೂತನಾದ, ಯೋಗಿಗಳಿಂದ ಸ್ತೋತ್ರ ಮಾಡಲ್ಪಡುತ್ತಿರುವ, ತನ್ನ ಬಾಹುಬಲದಿಂದ ಸಮಸ್ತ ರನ್ನೂ ಗೆದ್ದಿರುವ, ರಾಕ್ಷಸಶ್ರೇಷ್ಠರ ಅಭಿಮಾನವನ್ನು ಸೂರೆಗೊಂಡಿ ರುವ, ರಾಜಾಧಿರಾಜರೆಲ್ಲರನ್ನೂ ನಡುಗಿಸುವ ಪರಾಕ್ರಮವುಳ್ಳ , ಸೀತೆಯೊಡಗೂಡಿರುವ ಪರಬ್ರಹ್ಮ ಸ್ವರೂಪಿಯಾದ 'ರಾಮ' ಎಂಬ ಸ್ಥಿರಧಾಮ(ನೆಲೆ)ವನ್ನು , ಹೃದಯವೇ ನೆನೆ.

**ರಘುವರ ತವ ಮೂರ್ತಿರ್ಮಾಮಕೇ ಮಾನಸಾಂಕೇ**
**ನರಕಗತಿಹರಂ ತೇ ನಾಮಧೇಯಂ ಮುಖೇ ಮೇ।**
**ಅನಿಶಮತುಲಭಕ್ತ್ಯಾ ಮಸ್ತಕಂ ತ್ವತ್ಪದಾಬ್ಜೇ**
**ಭವಜಲನಿಧಿಮಗ್ನಂ ರಕ್ಷ ಮಾಮಾರ್ತಬಂಧೋ॥**

ಆರ್ತರಿಗೆ ಬಂಧುವಾದ ಶ್ರೀರಾಮ, ನಿನ್ನ ಮೂರ್ತಿಯು ನನ್ನ ಮನದಲ್ಲಿರುವಂತೆ, ನರಕವನ್ನು ದೂರ ಮಾಡುವ ನಿನ್ನ ಹೆಸರು ನನ್ನ ಬಾಯಿಯಲ್ಲಿ ನುಡಿಯುವಂತೆ, ಅತ್ಯಧಿಕ ಭಕ್ತಿ ಯಿಂದ ಕೂಡಿ ಸದಾ ನನ್ನ ಶಿರವು ನಿನ್ನ ಪದತಲದಲ್ಲಿ ಇರುವಂತೆ ಮಾಡಿ, ಸಂಸಾರಚಕ್ರದಲ್ಲಿ ಮುಳುಗಿರುವ ನನ್ನನ್ನು ರಕ್ಷಿಸು.

## ಸೂಕ್ತಿಪ್ರಭ

**ನಾವು ಪವಿತ್ರಾತ್ಮರೆಂದು ಹೇಳಿಕೊಳ್ಳುವುದು, ಇತರರಿಗೂ ಈ ಅಭಿಪ್ರಾಯವನ್ನು ಬೋಧಿಸುವುದು, ಇದೊಂದೇ ನಾವು ಗುರಿಯನ್ನು ಮುಟ್ಟಬೇಕಾದರೆ ಇರುವ ಏಕೈಕ ಮಾರ್ಗ. ನಾವು ಇದನ್ನು ಮನನ ಮಾಡುತ್ತಿದ್ದರೆ ಶಕ್ತಿ ಬರುವುದು. ನಮ್ಮ ಧ್ವನಿ ಶಕ್ತಿಪೂರಿತವಾಗುತ್ತಾ ಬರುವುದು. ಕೊನೆಗೆ ಸತ್ಯ ನಮ್ಮ ಹೃದಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದು.**

–ಸ್ವಾಮಿ ವಿವೇಕಾನಂದ





**ಮನಸ್ಸೇ ಎಲ್ಲವೂ ಆಗಿದೆ. ಶುದ್ಧ, ಅಶುದ್ಧ ಈ ಭಾವನೆಗಳೆಲ್ಲ ಮನಸ್ಸಿನಲ್ಲೇ ಇದೆ. ಮಾನವನು ಮೊದಲು ತನ್ನ ಮನಸ್ಸಿನಲ್ಲಿ ತಪ್ಪು ಮಾಡುತ್ತಾನೆ, ಬಳಿಕವೇ ಇತರರ ತಪ್ಪನ್ನೂ ಕಾಣುತ್ತಾನೆ.**

–ಶ್ರೀಮಾತೆ ಶಾರದಾದೇವಿ



**ಮನಃಶುದ್ಧಿ ಇಲ್ಲದವಗೆ ಮಂತ್ರದ ಫಲವೇನು?**
**ತನುಶುದ್ಧಿ ಇಲ್ಲದವಗೆ ತಂತ್ರದ ಫಲವೇನು?**

–ಪುರಂದರದಾಸರು



**ಯಾರ ಹೃದಯ ಪವಿತ್ರವಾಗಿದೆಯೋ ಅವರೇ ಧನ್ಯರು. ಏಕೆಂದರೆ ಅವರು ದೇವರನ್ನು ಕಾಣುತ್ತಾರೆ.**

–ಬೈಬಲ್

**ದೈವೀ ನೆಲೆಗೆ ಏರಬಯಸುವವನ ಮಾತು, ಮನಸ್ಸು, ಇಂದ್ರಿಯಗಳು ಪರಿಶುದ್ಧವಾಗಿರಬೇಕು; ಅವನ ಹೃದಯದಲ್ಲಿ ಅನುಕಂಪ ತುಂಬಿರಬೇಕು.**

–ಚಾಣಕ್ಯ

**ಪರಿಶುದ್ಧತೆ ಮತ್ತು ಸರಳತೆ – ಈ ಎರಡು ಗುಣಗಳಿಂದ ಮಾನವನು ಈ ಭೂಮಿಯ ಮತ್ತು ಎಲ್ಲ ನಶ್ವರ ಜಗತ್ತಿಗಿಂತ ಎತ್ತರಕ್ಕೆ ಹೋಗುವನು.**

–ಥಾಮಸ್ ಎ ಕೆಂಪಿಸ್



# ರಾಮಕೃಷ್ಣ ತಪೋವನ

(ರಾಮಕೃಷ್ಣ ಮಠ ಹಾಗೂ ರಾಮಕೃಷ್ಣ ಮಿಷನ್, ಬೇಲೂರು ಮಠ, ಪಶ್ಚಿಮ ಬಂಗಾಳ
ಇದರ ಮಾರ್ಗದರ್ಶನದಲ್ಲಿ ನಡೆಯುವ **ಕರ್ನಾಟಕ ರಾಮಕೃಷ್ಣ-ವಿವೇಕಾನಂದ
ಭಾವ ಪ್ರಚಾರ ಪರಿಷತ್** ಇದರ ಸದಸ್ಯತ್ವ ಹೊಂದಿದ ಸಂಸ್ಥೆ)

## ರಾಮಕೃಷ್ಣ ತಪೋವನ ಬಾಲಕಾಶ್ರಮ, ಪೊಳಲಿಯಲ್ಲಿ ಉಚಿತ ವಸತಿ ಸೌಲಭ್ಯ :

**ಅರ್ಜಿ ಆಹ್ವಾನ**

ಆರ್ಥಿಕವಾಗಿ ಹಿಂದುಳಿದ ಮತ್ತು ನಾನಾ ಕಾರಣಗಳಿಂದ ವಿದ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದ ಗ್ರಾಮೀಣ ಪ್ರತಿಭಾವಂತ ಹುಡುಗರಿಗೆ ಶಿಕ್ಷಣಕ್ಕೆ ನೆರವಾಗುವ ಅನ್ವಯ **ರಾಮಕೃಷ್ಣ ತಪೋವನ ಬಾಲಕಾಶ್ರಮವು** ಅರ್ಜಿ ಆಹ್ವಾನಿಸಿದೆ.

ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಹಾಗೂ ನೆರೆಯ ಜಿಲ್ಲೆಗಳ, 7 ನೇ ತರಗತಿಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು 8ನೇ ತರಗತಿಗೆ ಸೇರಬಹುದು. ಉಚಿತ ಶಿಕ್ಷಣ, ಊಟ ಮತ್ತು ವಸತಿ ಒದಗಿಸಲಾಗುವುದು. ಜೊತೆಗೆ ಭಜನೆ, ಸಂಗೀತ, ಯಕ್ಷಗಾನ, ತೋಟಗಾರಿಕೆ, ಕಂಪ್ಯೂಟರ್, ಶ್ರಮಸೇವೆ, ಭರತನಾಟ್ಯ ಇತ್ಯಾದಿ ತರಬೇತಿ ನೀಡಲಾಗುತ್ತದೆ. ಸುಂದರ ಹಳ್ಳಿಯ ಪರಿಸರದಲ್ಲಿ ಈ ಬಾಲಕಾಶ್ರಮವಿದ್ದು, ಆಸಕ್ತಿಯಿದ್ದ ಹುಡುಗರು 7ನೇ ತರಗತಿಯ ಪರೀಕ್ಷೆ ಮುಗಿದ ಕೂಡಲೇ ವೈಯಕ್ತಿಕ ವಿವರಗಳೊಂದಿಗೆ ದೂರವಾಣಿ ಇಲ್ಲವೆ ಅಂಚೆಯ ಮೂಲಕ ಸಂಪರ್ಕಿಸಬಹುದು. ಬಾಲಕಾಶ್ರಮದ ಪರಿಚಯ-ಮಾಹಿತಿಗಾಗಿ ವಿದ್ಯಾರ್ಥಿಗಳು ಒಂದು ವಾರ ಬಾಲಕಾಶ್ರಮದಲ್ಲಿ ಉಳಿದುಕೊಳ್ಳಬೇಕಾಗುತ್ತದೆ. ಮಕ್ಕಳ ಮೇಲ್ವಿಚಾರಣೆಯನ್ನು ಸ್ವತಃ ಸ್ವಾಮೀಜಿಯವರೇ ವಹಿಸಿಕೊಳ್ಳುವರು.

ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಬೇಕಾದ ವಿಳಾಸ : **ರಾಮಕೃಷ್ಣ ತಪೋವನ, ಶ್ರೀರಾಜರಾಜೇಶ್ವರಿ ದೇವಸ್ಥಾನದ ಬಳಿ,
ಕರಿಯಂಗಳ ಗ್ರಾಮ, ಪೊಳಲಿ ಅಂಚೆ,
ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ – 574219**

ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ : 9845165108, 0824–2016455, 2266655

## ಶ್ರೀರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ – 571216, ಕೊಡಗು ಜಿಲ್ಲೆ

Phone : 08274-249040, 249555; Email: srkseva@gmail.com; Website: rkmponnampet.org

# ವಸಂತ ವಿಹಾರ

**(ಬೇಸಿಗೆ ರಜದಲ್ಲಿ ಗಂಡುಮಕ್ಕಳಿಗಾಗಿ ಮೌಲ್ಯವರ್ಧನಾ ಕಾರ್ಯಾಗಾರ)**

**12.4.2015 ರಿಂದ 19.4.2015**

ಪ್ರಿಯ ಸ್ನೇಹಿತರೇ,

ಪೊನ್ನಂಪೇಟೆಯ ಆಶ್ರಮದ ಆವರಣದಲ್ಲಿ ಭಗವಾನ್ ಶ್ರೀರಾಮಕೃಷ್ಣರ ಭವ್ಯವಾದ ವಿಶ್ವಭಾವೈಕ್ಯ ಮಂದಿರವನ್ನು ನಿರ್ಮಿಸಲಾಗಿದೆ. ಈ ದೇವಾಲಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಹಲವಾರು ಸೇವಾಕಾರ್ಯಗಳನ್ನು ಆಶ್ರಮವು ನಡೆಸುತ್ತಿದೆ. 11 ರಿಂದ 15 ವರ್ಷ ವಯಸ್ಸಿನ ಶಾಲಾ ಮಕ್ಕಳಿಗಾಗಿ '**ವಸಂತ ವಿಹಾರ**' ಎಂಬ ಬೇಸಿಗೆ ಶಿಬಿರವನ್ನು 12.4.2015ರಿಂದ 19.4.2015ರ ವರೆಗೆ ನಡೆಸಲಿದ್ದೇವೆ. ಈ ಶಿಬಿರವು ಬೆಳಗಿನಿಂದ ಸಂಜೆಯವರೆಗೆ ಇರುತ್ತದೆ. ಪರಸ್ಥಳಗಳಿಂದ ಬರುವ ಮಕ್ಕಳಿಗೆ ಆಶ್ರಮದಲ್ಲಿ ಮತ್ತು ಹತ್ತಿರದ ಕೆಲವು ಆವಾಸಿ ಶಾಲೆಗಳಲ್ಲಿ ತಂಗುವ ವ್ಯವಸ್ಥೆಯನ್ನೂ ಮಾಡಲಿದ್ದೇವೆ. ಮಕ್ಕಳಿಗೆ ಯೋಗಾಸನ, ಪ್ರಾಣಾಯಾಮ, ಏಕಾಗ್ರತೆಯನ್ನು ಬೆಳೆಸಿಕೊಳ್ಳುವ ವಿಧಾನ, ವ್ಯಕ್ತಿತ್ವ ವಿಕಾಸ, ಮೌಲ್ಯಶಿಕ್ಷಣ, ಪ್ರಾರ್ಥನೆ ಮುಂತಾದವುಗಳನ್ನು ಹೇಳಿಕೊಡಲಾಗುವುದು. ನಿಮ್ಮ ಮಕ್ಕಳನ್ನು ಈ ಕಾರ್ಯಕ್ರಮಕ್ಕೆ ಕಳುಹಿಸಿಕೊಡುವುದರಿಂದ ನಮ್ಮ ಸನಾತನ ಧರ್ಮದ ಮೌಲ್ಯಗಳ ಬಗ್ಗೆ ಅವರಿಗೆ ಅರಿವು ಮೂಡುತ್ತದೆ. ಸ್ವಾಮಿ ವಿವೇಕಾನಂದರ ಆಶಯದಂತೆ ಅವರನ್ನು ಯೋಗ್ಯ, ಉಪಯುಕ್ತ ಪ್ರಜೆಗಳನ್ನಾಗಿ ರೂಪಿಸುವುದೇ ನಮ್ಮ ಉದ್ದೇಶ.

**ಶಿಬಿರ ಶುಲ್ಕ :** ವಸತಿ ರಹಿತ : ರೂ.350/- ; ವಸತಿ ಸಹಿತ : ರೂ.700/-. ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ : 8.4.2015

ಪ್ರೀತಿ ಮತ್ತು ಶುಭಾಶಯಗಳೊಂದಿಗೆ,

**1) 11ರಿಂದ 15 ವರ್ಷ ವಯಸ್ಸಿನ ಗಂಡುಮಕ್ಕಳಿಗೆ ಮಾತ್ರ. 2) ಖಾಲಿ ಕಾಗದದಲ್ಲಿ ವಿದ್ಯಾರ್ಥಿಯ ಹೆಸರು, ವಯಸ್ಸು, ತರಗತಿ, ತಂದೆತಾಯಿಗಳ ಹೆಸರು, ವಿಳಾಸ, ಲ್ಯಾಂಡ್ ಫೋನ್ ಮತ್ತು ಮೊಬೈಲ್ ಫೋನ್ ನಂಬರುಗಳನ್ನು ಬರೆದು, ಡಿ.ಡಿ. ಮೂಲಕ ಹಣವನ್ನು ಆಶ್ರಮಕ್ಕೆ ಕಳುಹಿಸಿರಿ.**

**ಭಗವತ್ಸೇವೆಯಲ್ಲಿ ತಮ್ಮವ
ಸ್ವಾಮಿ ಬೋಧಸ್ವರೂಪಾನಂದ**
ಅಧ್ಯಕ್ಷರು

# ಆತ್ಮಾವಲೋಕನ

–೧–

## ನಿಂತುಬಿಡುವ ಕ್ಷಣ

ಜೀವನದಲ್ಲಿ ಕೆಲವೊಂದು ಕ್ಷಣಗಳಿವೆ. ಇದ್ದಕ್ಕಿದ್ದಂತೆ ನಾವು ಮೈಮರೆತು ನಿಲ್ಲುತ್ತೇವೆ; ಮಾಡುತ್ತಿದ್ದ ಕೆಲಸದ ನಡುವೆ ಸ್ತಬ್ಧರಾಗಿ ನಿಂತುಬಿಡುತ್ತೇವೆ; ನಡೆಯುತ್ತಿದ್ದರೆ ಒಂದು ಘಳಿಗೆ ಹೆಜ್ಜೆ ಹಾಕುವುದನ್ನು ನಿಲ್ಲಿಸಿ, ಮತ್ತೆ ಮುಂದುವರಿಯುತ್ತೇವೆ. ಆ ಕ್ಷಣಕ್ಕಿಂತ ಹಿಂದಿನ ನಡಿಗೆಗೂ, ಅನಂತರದ ನಡಿಗೆಗೂ ತುಂಬ ವ್ಯತ್ಯಾಸವಿರುತ್ತದೆ. ಆದರೆ ಅದನ್ನು ನಾವು ಗಮನಿಸುವುದಿಲ್ಲ. ನಮ್ಮ ಪ್ರಪಂಚವೇ ಬದಲಾಗಿಬಿಡುತ್ತದೆ. ಹಿಂದೆ ಸ್ಥಿರವಾಗಿ, ಉತ್ಸಾಹಪೂರಿತರಾಗಿ ನಡೆಯುತ್ತಿದ್ದವರು, ಮುಂದೆ ಹೆಜ್ಜೆಹೆಜ್ಜೆಗೂ ನಿಟ್ಟುಸಿರು ಬಿಡುತ್ತೇವೆ.

ಹೌದು, ನಿಟ್ಟುಸಿರು – ನಮ್ಮ ಮಾನಸಿಕ ಸ್ಥಿತಿಗಳ ಸೂಚನೆ ಅದು. 'ಯಾವುದೋ ಒಂದು ಕ್ಷಣ' ನಮ್ಮ ಅಂತರಂಗವನ್ನೆಲ್ಲ ಕಲಕಿ, ನಮ್ಮ ಎಲ್ಲ ಚಟುವಟಿಕೆಗಳನ್ನೂ ಆವರಿಸಿಬಿಡುವ, ಮೈಮರೆಸುವ – ಆ ಕ್ಷಣ ಎಂಥದು? ಕಾರಣವೇನೇ ಇರಲಿ, ನಮ್ಮನ್ನು ತಟ್ಟಿದ ಸನ್ನಿವೇಶವೆಂಥದೇ ಇರಲಿ, ಅದು ಒಡಮೂಡಿದ್ದು ಆಲೋಚನೆಯಾಗಿ. ಪರಿಣಾಮವಾಗಿ, ನಮಗೆ ಯಾರಲ್ಲೂ ಮಾತು ಬೇಡವೆನಿಸುತ್ತದೆ, ಊಟ-ತಿಂಡಿಗಳಲ್ಲಿ ರುಚಿ ಇಲ್ಲದಾಗುತ್ತದೆ, ಯಾರ ಒಡನಾಟವೂ ಬೇಡವೆನಿಸುತ್ತದೆ. ನಿಂತಿರಲಿ, ಕುಳಿತಿರಲಿ, ಅಡ್ಡಾಡುತ್ತಿರಲಿ – ಮನಸ್ಸು ಆಳವಾಗಿ ಏನನ್ನೋ ಆಲೋಚಿಸುತ್ತಿರುತ್ತದೆ. ಅದೇನೋ ಕೊರೆಯುತ್ತದೆ, ದಿನ-ರಾತ್ರಿ, ಕನಸು-ಎಚ್ಚರ ಹೀಗೆ ಬೇರೆ ಬೇರೆ ಅವಸ್ಥೆಗಳಲ್ಲೆಲ್ಲ ನಮ್ಮನ್ನು ಕಾಡುತ್ತದೆ. ನಮ್ಮನ್ನು ತಟ್ಟಿದ ವಿಷಯ ಹೀಗಿರಬಹುದು: ಯಾರೋ ಆಪ್ತರ ಸಾವು, ಅತ್ಯಂತ ನಂಬಿಗಸ್ಥರೇ ಎಸಗಿದ ವಂಚನೆ, ನಮ್ಮ ಎಲ್ಲ ಪ್ರಯತ್ನಗಳೂ ವಿಫಲವಾಗಿ ಬೆನ್ನುಹತ್ತುವ ಹತಾಶೆ, ಯಾವುದೋ ದಾರುಣ ಪರಿಸ್ಥಿತಿಯ ನಿರ್ದಾಕ್ಷಿಣ್ಯ ಘಟನೆ, ಬದುಕಿನ ವ್ಯಂಗದ ಅಟ್ಟಹಾಸ – ಹೀಗೆ ಅನಿಶ್ಚಿತ, ಅವ್ಯವಸ್ಥಿತ ಸಂಗತಿಗಳು. ಆದರೆ ಪರಿಣಾಮವೊಂದೆ – ಭಾರವಾದ ಉಸಿರು, ನಿಟ್ಟುಸಿರು.

ಪ್ರತಿಯೊಬ್ಬರ ಬದುಕಿನಲ್ಲೂ ಬಂದೊದಗುವ ಇಂಥ ಕ್ಷಣಗಳು ನಮ್ಮನ್ನು ಎಲ್ಲಿಂದೆಲ್ಲಿಗೋ ಕರೆದೊಯ್ಯುತ್ತವೆ. ನಮ್ಮ ಜೀವನದ ಹಿಂದಿನ ಪುಟಗಳು ತೆರೆಯುತ್ತವೆ; ಅನೇಕ ವ್ಯಕ್ತಿಗಳ ಚಿತ್ರಗಳು ಹಾದುಹೋಗುತ್ತವೆ; ಮತ್ತೆ ಮತ್ತೆ ಕಾಡುವ ಕೆಲವು ಘಟನೆಗಳು ಹಿಂದಿರುಗುತ್ತವೆ. ಪದೇ ಪದೇ ಎದುರಾಗುವ ಪ್ರಶ್ನೆ: ಯಾಕೆ ಹೀಗೆ? ಅದಕ್ಕೆ ಉತ್ತರವಿಲ್ಲ. ಮತ್ತೆ ಮೌನ, ಆಲೋಚನೆಯ ಸುಳಿ, ಹತಾಶೆ. ಇಂತಹ ಕ್ಷಣಗಳಿಂದ ಯಾರಿಗೂ ಬಿಡುಗಡೆಯಿಲ್ಲ. ಏರುಪೇರುಗಳ, ಸುಖದುಃಖಗಳ ಈ ಪ್ರಯಾಣದಲ್ಲಿ ಇದೊಂದು ನಿಲುಗಡೆ. ಬೇಕಿರಲಿ, ಬೇಡದಿರಲಿ – ಇಂಥ ಕ್ಷಣ ಬಂದಾಗ ನಮಗರಿವಿಲ್ಲದೆ ನಮ್ಮೊಳಗೆ ಅನೇಕ ಸಂಗತಿಗಳು ನಡೆದುಹೋಗುತ್ತವೆ.

## ಗಮನ ಕೊಡದ ಯೋಚನೆಗಳು

ಮೊದಲನೆಯದಾಗಿ, ಇಂಥ ವಿಚಿತ್ರ ಸನ್ನಿವೇಶಗಳಲ್ಲಿ ಮೂಡಿಬರುವ ಆಲೋಚನೆಗಳಿಗೆ ಬಹುಪಾಲು ಜನ ಗಮನ ಕೊಡುವುದೇ ಇಲ್ಲ. ತನ್ನ ಅವಸ್ಥೆ ಸ್ತಬ್ಧವಾಗಿ, ಕೆಲಸ ಕಾರ್ಯವೆಲ್ಲ ಹಾಳಾದದ್ದನ್ನು ಸ್ವಲ್ಪ ಹೊತ್ತಿನ ನಂತರ ತಿಳಿದು, 'ಹಾಳು ಆಲೋಚನೆ!' ಎಂದು ತಮ್ಮನ್ನೇ ಹಳಿದುಕೊಳ್ಳುತ್ತ, ಮತ್ತೆ ಕೆಲಸ ಮುಂದುವರೆಸುತ್ತಾರೆ. ಬಲವಂತವಾಗಿ ಸನ್ನಿವೇಶದ, ಸುತ್ತಮುತ್ತಲ ಪರಿಸ್ಥಿತಿಗೆ ತಮ್ಮನ್ನೊಡ್ಡಿ 'ಕದಡಿದ' ಆಲೋಚನೆಯಿಂದ ದೂರವಾಗುತ್ತಾರೆ. ಅವರಿಗೆ ಗೊತ್ತಿದೆ, ಅಂಥ ಆಲೋಚನೆಗೆ ಪರಿಹಾರವಿಲ್ಲ; ಸಮಸ್ಯೆಗೆ ಉತ್ತರವಿಲ್ಲ. ಅದು ಜೀವನದಲ್ಲಿ ಅನಿವಾರ್ಯ. ಅದನ್ನು ಎದುರಿಸಲೇಬೇಕು, ಅನುಭವಿಸಲೇಬೇಕು. ತಲೆತಿನ್ನುವ ಆಲೋಚನೆಗಳು ವೇದನೆಯನ್ನುಂಟುಮಾಡುತ್ತವೆ ಎಂದು ಹಲವು ಬಗೆಯ 'ಬಿಡುಗಡೆಯ' ಸಾಧನಗಳಿಗೆ ಮೊರೆಹೋಗುತ್ತಾರೆ. ಆದರೆ ಇಂಥ ಆಲೋಚನೆಗಳ ಆಳದಲ್ಲಿ ಮಾನವನ ಮೂಲಭೂತ ಸಮಸ್ಯೆಗಳ ಎಳೆ ಅಡಗಿ ಕುಳಿತಿದೆಯೆಂದೂ, ಅದು ಕೇವಲ ತನ್ನ ಸಮಸ್ಯೆಯಾಗಿರದೆ ಇಡೀ ಬದುಕಿನ ಸಮಸ್ಯೆಯಾಗಿದೆಯೆಂದೂ ಅವರಿಗೆ ಅನ್ನಿಸುವುದಿಲ್ಲ. ಹೀಗೆ ಅವರು ಬದುಕಿನ ಆಳದಲ್ಲಿ ಅಡಗಿರುವ ಸತ್ಯಗಳನ್ನು ಕಂಡುಕೊಳ್ಳುವ ಒಂದು ಅವಕಾಶವನ್ನು ಕಳೆದುಕೊಳ್ಳುತ್ತಾರೆ.

ಎರಡನೆಯದಾಗಿ, ಒಬ್ಬ ವ್ಯಕ್ತಿಯನ್ನು ಕಲಕುವ ಸನ್ನಿವೇಶ ಅವನ ಭಾವನಾತ್ಮಕ ಸಂವೇದನೆಗಳನ್ನು ಪ್ರಭಾವಿಸುವುದರಿಂದ, ಬಹುಪಾಲು ಜನ ಅಂಥ ಸಂವೇದನೆಗಳಾಚೆ ನಿಂತು, ಬದುಕಿನ ನಿಷ್ಠುರ ಸತ್ಯಗಳನ್ನು ಕುರಿತು ವಿಶ್ಲೇಷಣೆ ನಡೆಸಲಾರರು. ಅಂಥ ಆಲೋಚನೆಗಳು ತಂದೊಡ್ಡುವ ತಾತ್ಕಾಲಿಕ ಪರಿಹಾರದಲ್ಲೇ ಅವರ ಗಮನ ಕೇಂದ್ರೀಕೃತವಾಗಿ, ವೈಯಕ್ತಿಕ ನೆಲೆಯನ್ನು ದಾಟಿ ಅವರು ಸಾಗುವುದೇ ಇಲ್ಲ. ಹೀಗೆ ಬದುಕು ಕಲಿಸುವ ಪಾಠ ಹಲವು ಕವಲುದಾರಿಗಳಿಂದ ಕೂಡಿದ್ದು, ನಡುನಡುವೆ ಲಭಿಸುವ ಇಂಥ ಆತ್ಮಾವಲೋಕನದ ಕ್ಷಣಗಳನ್ನು ಅವರು ಕಳೆದುಕೊಳ್ಳುತ್ತಾರೆ.

## ಆತ್ಮಾವಲೋಕನ : ಅರ್ಥವ್ಯಾಪ್ತಿ

'ಆತ್ಮಾವಲೋಕನ' – ಈ ಪದವೇ ಒಂದು ವಿಶೇಷ. ತನ್ನಲ್ಲೇ ತಾನು ಮುಳುಗಿ ಆಳವಾದ ಚಿಂತನೆ ನಡೆಸುವುದಕ್ಕೆ ಹೀಗೆನ್ನುತ್ತೇವೆ. ನಮ್ಮ ನಡೆನುಡಿ, ಸ್ವಭಾವ, ಕಾರ್ಯವಿಧಾನಗಳಲ್ಲಿ ಆಗಿರುವ ತಪ್ಪು ಒಪ್ಪುಗಳನ್ನು ನಾವೇ ಕಂಡುಕೊಳ್ಳುವುದು; 'ಮುಂದೆ ಹೇಗೆ ಸರಿ ಪಡಿಸಿಕೊಳ್ಳಬಲ್ಲೆ?' ಎಂದು ಅರಿತುಕೊಳ್ಳುವುದು; ಸೋಲು, ಕಷ್ಟ ನಷ್ಟಗಳಿಗೆ ಕಾರಣವನ್ನು ಕಂಡುಕೊಂಡು ಮುಂದೆ ಹಾಗಾಗದಂತೆ ಹೇಗೆ ಎಚ್ಚರ ವಹಿಸುವುದು – ಹೀಗೆ ನಮ್ಮನ್ನು ಸ್ಥಿರಗೊಳಿಸುವ ಈ ಎಲ್ಲ ಮಾನಸಿಕ ಕ್ರಿಯೆಗಳನ್ನು ನಾವು ಇದರೊಂದಿಗೆ ಸೇರಿಸುತ್ತೇವೆ. ಆದರೆ ಇಷ್ಟೇ ಅಲ್ಲ, 'ಆತ್ಮಾವಲೋಕನ' ಪದ ಇನ್ನೊಂದು ವಿಶೇಷ ಅರ್ಥವನ್ನೂ ಸೂಚಿಸುತ್ತದೆ: ಈ ಪದದ ಅರ್ಥ 'ತನ್ನನ್ನು ತಾನು ಕಾಣುವುದು' ಎಂದು. ಆತ್ಮ ಎಂಬುದು ಪರಬ್ರಹ್ಮನ ಇನ್ನೊಂದು ಹೆಸರಾದ್ದರಿಂದ 'ಆತ್ಮದರ್ಶನ' ಅಥವಾ 'ಸಾಕ್ಷಾತ್ಕಾರ' ಎಂಬ ಅರ್ಥವನ್ನು ಇದು ನೆನಪಿಸುತ್ತದೆ. ಕನ್ನಡದಲ್ಲಿ 'ಆತ್ಮಾವಲೋಕನ' ವೆಂಬ ಮಾತಿಗೆ ಸಾಮಾನ್ಯ ವ್ಯವಹಾರದಲ್ಲಿ ಇಷ್ಟು ವ್ಯಾಪಕವಾದ ಅರ್ಥವಿಲ್ಲ ಎಂಬುದೇನೋ ನಿಜ; ಅದರ ಅರ್ಥವನ್ನು ನಾವು ವಿಸ್ತರಿಸುವ ಅಗತ್ಯವಿಲ್ಲದಿದ್ದರೂ, ವಾಸ್ತವವಾಗಿ ಚಿಂತನೆಗೆ ಹಚ್ಚುವ, ಕಾಡುವ ಅಂಥ 'ವಿಶೇಷ ಕ್ಷಣ'ಗಳ ಬೇರು ಎಲ್ಲೆಲ್ಲೋ ಆಳವಾಗಿ ಊರಿ ನಿಂತಿದ್ದು, ಆಲೋಚನೆಗಳ ಮೂಲಕ ಆ ಬೇರಿನ ಬೆನ್ನುಹತ್ತುತ್ತಾ ಹೋಗುವುದರಿಂದ, ಅದು ಅಂತಿಮವಾಗಿ 'ಆತ್ಮ'ನಲ್ಲೇ ಬಂದು ನಿಲ್ಲುತ್ತದೆ; ಈ ದೃಷ್ಟಿಯಿಂದ ಅದು ಕೇವಲ ಆಲೋಚನೆಯಷ್ಟೇ ಆಗಿರುವ 'ಆತ್ಮಾವಲೋಕನ'ವಾಗಿರದೆ, ನಿಜವಾದ 'ಆತ್ಮದರ್ಶನ'ದತ್ತ ನಮ್ಮನ್ನೊಯ್ಯುವ ಒಂದು ಮಾನಸಿಕ ಕ್ರಿಯೆಯೂ ಆಗುವುದು. ಆದ್ದರಿಂದ 'ಆತ್ಮಾವಲೋಕನ' ಪದಕ್ಕೆ ಆಧ್ಯಾತ್ಮಿಕ ಆಯಾಮವನ್ನು ನೀಡುವ ಸಾಧ್ಯತೆ ಹಾಗೂ ಅವಕಾಶ ಇದ್ದೇ ಇದೆ.

– ೨ –

## ಜೀವನದಲ್ಲಿ ಏಕಾಂತ : ಶ್ರೀರಾಮಕೃಷ್ಣರ ಮಾತು

ಒಂದು ದಿನ ಭಕ್ತರೊಡನೆ ಮಾತನಾಡುತ್ತ ಶ್ರೀರಾಮಕೃಷ್ಣರು ಹೇಳುತ್ತಾರೆ: 'ಸಂಸಾರದಲ್ಲಿ ನಿರ್ಲಿಪ್ತತೆಯಿಂದ ಇರಬೇಕಾದರೆ ಕಿಂಚಿತ್ ಸಾಧನೆಯನ್ನು ಮಾಡಲೇಬೇಕಾಗುತ್ತದೆ. ಸ್ವಲ್ಪ ಕಾಲವನ್ನು ನಿರ್ಜನಪ್ರದೇಶದಲ್ಲಿ ಕಳೆಯಬೇಕಾಗುತ್ತದೆ – ಒಂದು ವರ್ಷವನ್ನೊ, ಆರು ತಿಂಗಳನ್ನೊ, ಮೂರು ತಿಂಗಳನ್ನೊ, ಕೊನೆಗೆ ಒಂದು ತಿಂಗಳನ್ನಾದರೂ ಸರಿಯೆ. ಆ ಏಕಾಂತವಾಸದಲ್ಲಿ ಭಗವಂತನ ಕಡೆ ಮನಸ್ಸನ್ನು ತಿರುಗಿಸಿ, ಅತ್ಯಂತ ವ್ಯಾಕುಲತೆಯಿಂದ ಆತನ ಪಾದಪದ್ಮಗಳಲ್ಲಿ ತನಗೆ ಭಕ್ತಿಯುಂಟಾಗುವಂತೆ ಆತನಿಗೆ ಸರ್ವದಾ ಪ್ರಾರ್ಥನೆ ಮಾಡಿಕೊಳ್ಳುತ್ತಿರಬೇಕು.' *(ಶ್ರೀರಾಮಕೃಷ್ಣ ವಚನವೇದ ಸಂಪುಟ ೨, ಪು. ೪೫೧)*

ಇದು ವೈರಾಗ್ಯಪರರಾದ ಆಧ್ಯಾತ್ಮಿಕ ಸಾಧಕರಿಗೆ ಮಾತ್ರ ಹೇಳಿದ ಮಾತಲ್ಲ; ಸಂಸಾರದಲ್ಲಿರುವ ಜನಸಾಮಾನ್ಯರೆಲ್ಲರಿಗೂ ಹೇಳಿರುವ ಮಾತು. ಏಕಾಂತದಲ್ಲಿದ್ದು ಭಗವಂತನ ಸಂಬಂಧವಾಗಿ ಚಿಂತನೆ ಮಾಡುವುದರಿಂದ ಪ್ರಪಂಚದ ಬೇಗೆ ಕಡಿಮೆಯಾಗುತ್ತದೆ, ಮನಸ್ಸು ಉನ್ನತ ವಿಚಾರಗಳತ್ತ ಹರಿಯುತ್ತದೆ. ಆಧ್ಯಾತ್ಮಿಕ ಸ್ತರದಲ್ಲಿ ಮನಸ್ಸನ್ನು ಇಟ್ಟುಕೊಳ್ಳಲು ಇಂಥ ಸಾಂದರ್ಭಿಕ ಕ್ರಿಯೆಗಳು ಅತ್ಯಗತ್ಯವೆಂದೂ, ಇದರಿಂದ ಸಾಧನೆ ಸುಲಭವೆಂದೂ ತಿಳಿದುಕೊಳ್ಳಬೇಕು. ಹೀಗೆ ಏಕಾಂತದಲ್ಲಿ ಭಗವಂತನ ಚಿಂತನೆ ನಡೆಸುವಾಗ ಪ್ರಪಂಚದ ಆಗುಹೋಗುಗಳೆಲ್ಲ ಸಂಪೂರ್ಣ ಮರೆತುಹೋಗುತ್ತವೆ ಎನ್ನಲಾಗದು; ವ್ಯಕ್ತಿ ತನ್ನನ್ನು ಕುರಿತು, ತನ್ನ ಜೀವನವನ್ನು ಕುರಿತು ನಿರಂತರ ಚಿಂತನೆ ನಡೆಸುತ್ತಲೇ ಇರುತ್ತಾನೆ, ಆದರೆ ಏಕಾಂತದಲ್ಲಿ ಈ ಚಿಂತನೆಗಳೆಲ್ಲ ಭಗವನ್ಮುಖವಾಗುತ್ತವೆ. ಮನಸ್ಸನ್ನು ಕಲಕುವ, ಹದಗೆಡಿಸುವ ಆಲೋಚನೆಗಳೂ ಒಂದಲ್ಲ ಒಂದು ರೀತಿ ಉತ್ತರ ಕಂಡುಕೊಳ್ಳುತ್ತವೆ. ಭಗವನ್ಮಯವಾದ ಆಲೋಚನೆಗಳು ಜಗತ್ತು, ಜೀವನ, ಸನ್ನಿವೇಶಗಳನ್ನು ಹೊಸ ಅರ್ಥದಲ್ಲಿ ಅರಿತುಕೊಳ್ಳಲು ನಮ್ಮನ್ನು ಪ್ರೇರೇಪಿಸುತ್ತವೆ. ಹೀಗೆ ಏಕಾಂತದಲ್ಲಿ ನಡೆಯುವ ಆತ್ಮಾವಲೋಕನ ಲೌಕಿಕ–ಆಧ್ಯಾತ್ಮಿಕ ಜೀವನದ ಸೇತುವೆಯಾಗಿ ಪರಿಣಮಿಸುತ್ತದೆ.

ದೀರ್ಘಕಾಲದ ಜೀವನದಿಂದ, ವಿಶಾಲ ಅನುಭವಗಳ ಆಧಾರದಿಂದ ಹಲವರು ಇಳಿವಯಸ್ಸಿನಲ್ಲಿ ಜೀವನದ ಸತ್ಯಗಳನ್ನು ಕಂಡುಕೊಳ್ಳುತ್ತಾರೆ. ಮಾತಿಗೆ ತೊಡಗಿದರೆ ಸಾಕು, ವೇದಾಂತ ಹಾಗೂ ಇತರ ತತ್ತ್ವವಿಚಾರಗಳು ಹೊರಬರುತ್ತವೆ. ಆದರೆ ವಿಷಾದದ ಸಂಗತಿಯೆಂದರೆ, ಅವರು ಕಂಡುಕೊಂಡ ಸತ್ಯಗಳ ಹಿನ್ನೆಲೆಯಲ್ಲಿ ಹೊಸ ಬದುಕನ್ನು ಕಟ್ಟಲು ಅವರಿಗೆ ಹೆಚ್ಚು ಸಮಯಾವಕಾಶವೇ ಇರುವುದಿಲ್ಲ. 'ಕಾಲಮೀರಿತು' ಎಂದು ಹತಾಶೆಗೊಳಗಾಗುತ್ತಾರೆ.

## ಕಲಾವಿದರ, ಚಿಂತಕರ ಆಳವಾದ ಬದುಕು

ಆಳವಾದ ಚಿಂತನೆಗೆ ಜೀವನಾನುಭವ ಮಾತ್ರವೇ ಕಾರಣವಾಗಬೇಕಿಲ್ಲ. ಹಲವು ಮಂದಿ ಕಲಾವಿದರು, ಸಾಹಿತ್ಯಾಸಕ್ತರು, ಚಿಂತಕರು, ತತ್ತ್ವಶಾಸ್ತ್ರದ ಮನೋಭಾವವುಳ್ಳವರು ಅನೇಕ ಬಾರಿ ಆಳವಾದ ಚಿಂತನೆಯಲ್ಲಿ ಮುಳುಗಿ ಆತ್ಮಾವಲೋಕನ ಮಾಡಿಕೊಳ್ಳುತ್ತಾರೆ. ಜನಸಾಮಾನ್ಯರು 'ಆತ್ಮಾವಲೋಕನ'ದಲ್ಲಿ ತೊಡಗುವ

ಮೊದಲೇ ಹೊಸ ಸನ್ನಿವೇಶದಲ್ಲಿ ಮುಳುಗಿಬಿಡುತ್ತಾರೆ; ಆದರೆ ಮೇಲೆ ಹೇಳಿದ ಚಿಂತಕರು ಈ ರೀತಿಯ ವಿಶಿಷ್ಟ ಸನ್ನಿವೇಶದಲ್ಲೇ ಆಳವಾಗಿ ಮುಳುಗಿ ಆತ್ಮಾವಲೋಕನ ನಡೆಸುತ್ತಾರೆ. ಇಲ್ಲಿನ ಪ್ರಶ್ನೆ ಯೇನೆಂದರೆ, ಅವರ ಈ ಬಗೆಯ ಆತ್ಮಾವಲೋಕನ ಭಗವನ್ಮುಖ ವಾಗಿದೆಯೇ, ಇಲ್ಲವೇ – ಎಂಬುದು. ಅವರವರ ನಂಬಿಕೆಗೆ ಅನುಗುಣವಾಗಿ ವ್ಯಕ್ತಿ ಆಸ್ತಿಕನೋ, ನಾಸ್ತಿಕನೋ ಆಗಿರಬಹುದು; ಆದರೆ ಆಸ್ತಿಕನಿಗೆ ಆತ್ಮಾವಲೋಕನದ ಲಾಭ ಅಧಿಕವೆನ್ನುವುದರಲ್ಲಿ ಸಂಶಯವಿಲ್ಲ.

– ೩ –

## ಆಧ್ಯಾತ್ಮಿಕತೆ ಮತ್ತು ಆತ್ಮಾವಲೋಕನ

ಒಬ್ಬೊಬ್ಬರ ಮನಸ್ಸೂ ಒಂದೊಂದು ರೀತಿ. ಆದರೆ ಎಲ್ಲ ಭಿನ್ನತೆಗಳ ನಡುವೆ ಹಲವು ಸಮಾನ ಧರ್ಮಗಳಿವೆ, ಸರ್ವೇ ಸಾಮಾನ್ಯವೆನಿಸುವ ಪ್ರಕ್ರಿಯೆಗಳಿವೆ. ಆಲೋಚನೆ, ಗ್ರಹಿಕೆ, ನೆನಪು, ಮರೆವು, ವಿಶ್ಲೇಷಣೆ, ಬುದ್ಧಿಶಕ್ತಿ ಈ ಎಲ್ಲ ಕ್ರಿಯೆಗಳು ಅನೈಚ್ಛಿಕ ವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ಪ್ರವಾಹದಂತೆ ನಿರಂತರ ಮುಂದುವರಿಯುತ್ತಿರುವಾಗ ಜೀವನದಲ್ಲಿ ಅನುಭವ ಗಳು, ಸುಖದುಃಖಗಳು, ಭಾವನೆಗಳು ನಮ್ಮ ಸ್ವಭಾವವನ್ನು ರೂಪಿಸುತ್ತವೆ. ಎಲ್ಲೋ ಕೆಲವರು ಮಾತ್ರ ಇವೆಲ್ಲದರ ನಡುವೆ ಪ್ರಜ್ಞಾಪೂರ್ವಕವಾಗಿ ಆತ್ಮಾವಲೋಕನ ನಡೆಸುತ್ತಾರೆ, ಜೀವನದ ಆಳ ವಿಚಾರಗಳನ್ನು ಕುರಿತು ಚಿಂತನೆ ನಡೆಸುತ್ತಾರೆ. ಆತ್ಮಾವ ಲೋಕನದ ಫಲವಾಗಿ ಅವರ ಮನಸ್ಸು ಆಧ್ಯಾತ್ಮಿಕ ವಿಚಾರಗಳತ್ತ ಹರಿದರೆ, ಅವರ ಜೀವನದಲ್ಲಿ ಒಂದು ಪರಿವರ್ತನೆಯುಂಟಾಗು ವುದು. ತಾವು ಕಂಡುಕೊಂಡ ಸತ್ಯಗಳನ್ನು ಸಾಕಾರಗೊಳಿಸುವ ಅವಕಾಶವೂ ಅವರಿಗೆ ಲಭಿಸಿ, ಅವರ ಭವಿಷ್ಯಜೀವನ ಹೊಸ ರೀತಿಯಲ್ಲಿ ರೂಪುಗೊಳ್ಳುವುದು. ಅಂಥವರು ಭಾಗ್ಯವಂತರು. ಆಧ್ಯಾತ್ಮಿಕ ಜೀವನದ ಪ್ರಮುಖ ಅಂಗವಾದ ಧ್ಯಾನದಲ್ಲಿ ನಿರಂತರ ಆತ್ಮಾವಲೋಕನ ನಡೆಯುವುದು. ಶ್ರೀಮಾತೆ ಶಾರದಾದೇವಿ ಯವರು ಒಂದೆಡೆ ಹೇಳುತ್ತಾರೆ: ''ಸಾಯಂಕಾಲ ಧ್ಯಾನಕ್ಕೆ ಕುಳಿತರೆ ಇಡೀ ದಿನ ಏನೇನು ಒಳ್ಳೆಯ ಅಥವಾ ಕೆಟ್ಟ ಕೆಲಸ ಮಾಡಿದೆ, ಏನು ಮಾಡಿಲ್ಲ ಈ ಎಲ್ಲ ಆಲೋಚನೆಗಳು ಮನಸ್ಸಿಗೆ ಬರುವುವು. ಅಂತೆಯೇ ಹಿಂದಿನ ಮನಸ್ಸಿನ ಅವಸ್ಥೆಯೊಂದಿಗೆ ಈಗಿನ ಮನಸ್ಸಿನ ಅವಸ್ಥೆಯನ್ನು ಹೋಲಿಸಿ ನೋಡಬೇಕು. ಅನಂತರ ಜಪ ಮಾಡುತ್ತ ಇಷ್ಟಮೂರ್ತಿಯನ್ನು ಧ್ಯಾನಿಸಬೇಕು.'' *(ಶ್ರೀ ಶಾರದಾದೇವಿ ವಚನ ವೇದ, ಪು. ೫೫೦)* ಇದೇ ಆತ್ಮಾವಲೋಕನದ ಆಧ್ಯಾತ್ಮಿಕ ಸ್ವರೂಪ.

## ಆಲೋಚನೆಗಳಲ್ಲಿ ಒಂದಾದ ಮನಸ್ಸು

ಮನಸ್ಸು ಆಲೋಚನೆಗಳಿಂದ ಕೂಡಿರುವಾಗ ನಾವು ಅರಿವಿಲ್ಲದೆ ಅಂಥ ಆಲೋಚನೆಗಳಲ್ಲಿ ನಮ್ಮನ್ನು ಗುರುತಿಸಿಕೊಳ್ಳುತ್ತೇವೆ; ಅವುಗ ಳಲ್ಲಿ ಒಂದಾಗಿಬಿಡುತ್ತೇವೆ. ಇದನ್ನು 'ಪಾತಂಜಲ ಯೋಗಸೂತ್ರ' ದಲ್ಲಿ '**ವೃತ್ತಿಸಾರೂಪ್ಯಮಿತರತ್ರ**' *(ಯೋ.ಸೂ., ೧.೪)* ಎನ್ನಲಾಗಿದೆ. ಅಂದರೆ, ಧ್ಯಾನದ ಸ್ಥಿತಿಯಿಲ್ಲದಾಗ (ಇತರತ್ರ) ನಾವು ನಮ್ಮ ವೃತ್ತಿ (ಆಲೋಚನೆ)ಗಳಲ್ಲಿ ಒಂದಾಗಿರುತ್ತೇವೆ ಎಂದರ್ಥ. ಹೀಗೆ ಅವುಗ ಳಲ್ಲಿ ಒಂದಾಗದೆ, ಆಲೋಚನೆಗಳ ಏರುಪೇರನ್ನು ಮೀರಿಹೋಗಿ ಮನಸ್ಸನ್ನು ಒಂದೇ ವಸ್ತುವಿನಲ್ಲಿ ನಿಲ್ಲಿಸುವುದೇ ಧ್ಯಾನ. ಇದು ಸಾಧ್ಯವಾಗುವುದು ನಮ್ಮ ಮನಸ್ಸನ್ನು ನಾವು ಗಮನಿಸುವುದರಿಂದ. ಆತ್ಮಾವಲೋಕನ ಧ್ಯಾನಕ್ಕೆ ಪೂರ್ವಭಾವಿಯಾಗಿ ಬರುವ ಒಂದು ಸಹಜವಾದ ಮಾನಸಿಕ ಕ್ರಿಯೆ. ಇದನ್ನು ಧ್ಯಾನಕ್ಕೆ ಸಹಾಯಕವಾಗಿ ಪರಿವರ್ತಿಸಿಕೊಳ್ಳುವುದು ಸಾಧನೆಯಲ್ಲಿ ಅಗತ್ಯವೆಂದು ಅನೇಕ ಮಂದಿ ಆಧ್ಯಾತ್ಮಿಕ ಮಹಾಪುರುಷರ ಅಭಿಪ್ರಾಯ.

## ಆಧುನಿಕ ಸನ್ನಿವೇಶದಲ್ಲಿ

ಸಾಮಾಜಿಕ ಜೀವನಕ್ಕೂ ಆಧ್ಯಾತ್ಮಿಕ ಜೀವನಕ್ಕೂ ಸಂಬಂಧವೇ ಇಲ್ಲ, ಆಧ್ಯಾತ್ಮಿಕ ವ್ಯಕ್ತಿ ಸಮಾಜದಿಂದ ದೂರವಾಗಿ ಏಕಾಂತದಲ್ಲಿ ಬದುಕುತ್ತಾನೆ ಎನ್ನುವುದು ಹಿಂದಿನ ಮಾತು. ಆಧುನಿಕ ಜಗತ್ತಿನಲ್ಲಿ, ಹೊಸ ಸನ್ನಿವೇಶದಲ್ಲಿ ಆಧ್ಯಾತ್ಮಿಕತೆ ಹೊಸ ಆಯಾಮವನ್ನು ಕಂಡು ಕೊಳ್ಳುತ್ತಿದೆ, ಹೊಸ ದಿಕ್ಕಿನಲ್ಲಿ ಮುನ್ನಡೆಯುತ್ತಿದೆ. ಪ್ರಪಂಚದಲ್ಲಿದ್ದು ಕೊಂಡೇ ಪ್ರಪಂಚವನ್ನು ಮೀರುವ, ಸಂಸಾರದಲ್ಲಿದ್ದುಕೊಂಡೇ ತ್ಯಾಗ–ವೈರಾಗ್ಯಗಳ ಆದರ್ಶವನ್ನು ಸಾಧಿಸುವ ಅಗತ್ಯವನ್ನು ಜನತೆ ಕಂಡುಕೊಳ್ಳುತ್ತಿದೆ. ವ್ಯವಹಾರ ಜಗತ್ತು ಕಟ್ಟಿಕೊಡುವ ಭ್ರಮಾತ್ಮಕ ಬದುಕಿನಿಂದ ಹೊರಬಂದು, ವಾಸ್ತವ ಪ್ರಪಂಚದ ಗುಣಾವಗುಣ ಗಳ ವಿವೇಚನೆ ನಡೆಸುವ ಅಗತ್ಯ ಇಂದಿನ ಆಧುನಿಕ ಸಮಾಜಕ್ಕೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಆತ್ಮಾವಲೋಕನವು ಸಾಮಾಜಿಕ ಬದುಕಿನೊಂದಿಗೆ ಸಾಮರಸ್ಯವನ್ನು ಸಾಧಿಸುತ್ತ, ಆಧ್ಯಾತ್ಮಿಕ ಸಾಧ ನೆಗೆ ಅಗತ್ಯವಾದ ಪರಿಸರ, ಮನೋಭಾವ ಮತ್ತು ಬೌದ್ಧಿಕ ನೆಲೆ ಗಟ್ಟನ್ನು ಒದಗಿಸುವುದು. ಸಂಪೂರ್ಣ ವೈಯಕ್ತಿಕ ಹಂತದ ಈ ಸಿದ್ಧತೆ ಗಳನ್ನು ಪ್ರತಿಯೊಬ್ಬನೂ ತನ್ನ ತಿಳುವಳಿಕೆ ಹಾಗೂ ಪ್ರಯತ್ನ ಗಳಿಂದಲೇ ಕಂಡುಕೊಳ್ಳಬೇಕಾಗಿದೆ.

ಎಲ್ಲ ಗೊಂದಲದ, ಗದ್ದಲದ ಹಿಂದೆ ಶಾಂತ ಬದುಕಿನ ಮಂದ್ರ ಶ್ರುತಿ ನಿರಂತರ ಹರಿಯುತ್ತಿರುತ್ತದೆ. ಸಮಾಜದಲ್ಲಿ ಹೇಗೋ, ನಮ್ಮ ವೈಯಕ್ತಿಕ ಬದುಕಿನಲ್ಲೂ ಇದು ಸತ್ಯ. ಒಂದು ಕ್ಷಣ ನಿಂತು ನಾವು ಗಮನಿಸಬೇಕು. ನಮ್ಮನ್ನು ಕಾಡುವ, ಕದಡುವ ಹಾಗೂ ಹತಾಶೆಗೆ ಈಡುಮಾಡುವ ವಿಚಾರ–ಸನ್ನಿವೇಶಗಳ ಹಿಂದೆ ಜೀವನದ ನಿಯಮ ಗಳಿರುತ್ತವೆ, ಆಳವಾದ ಸತ್ಯಗಳು ಅಡಗಿರುತ್ತವೆ. ಅವುಗಳನ್ನು ಕಂಡು ಕೊಳ್ಳದೆ, ಅಂಥ ಗೊಂದಲದ ಆಲೋಚನೆಗಳಿಂದ ತಪ್ಪಿಸಿಕೊಳ್ಳುವ ಮೂಲಕ ನಾವು ಅವುಗಳಲ್ಲೇ ನಿರಂತರ ಬಂಧಿತರಾಗುತ್ತೇವೆ. ಅದಕ್ಕೆ ಬದಲಾಗಿ ಸ್ವಲ್ಪ ಆಳವಾಗಿ ಚಿಂತಿಸೋಣ, ಆತ್ಮಾವಲೋಕನ ನಡೆ ಸೋಣ. ಆಳವಾದ ಸತ್ಯಗಳನ್ನು ಅರ್ಥಮಾಡಿಕೊಳ್ಳೋಣ. ಹೊಸ ಬದುಕನ್ನು ಕಟ್ಟುವಲ್ಲಿ, ಹೊಸ ದಾರಿಗಳನ್ನು ಕಂಡುಕೊಳ್ಳುವಲ್ಲಿ ಅವು ನೆರವಾಗುತ್ತವೆ. ✷



# ಸಿದ್ಧರು

* ಜೀವರಲ್ಲಿ ನಾಲ್ಕು ವಿಧ – ಬದ್ಧಜೀವ, ಮುಮುಕ್ಷುಜೀವ, ಮುಕ್ತಜೀವ, ನಿತ್ಯಜೀವ. ಎಲ್ಲರೂ ಸಾಧನೆ ಮಾಡಲೇಬೇಕು ಎಂಬುದೇ ನಿಲ್ಲ. ನಿತ್ಯಸಿದ್ಧರೂ ಇದ್ದಾರೆ, ಸಾಧನಸಿದ್ಧರೂ ಇದ್ದಾರೆ. ಕೆಲವರು ಬಹಳವಾಗಿ ಸಾಧನೆ ಮಾಡಿದ ಬಳಿಕ ಭಗವಂತನನ್ನು ಪಡೆದುಕೊಳ್ಳುತ್ತಾರೆ. ಇನ್ನು ಕೆಲವರು ಆಜನ್ಮದಿಂದಲೇ ಸಿದ್ಧರು.

* ಯಾರು ಕಾಮಕಾಂಚನಗಳಲ್ಲೇ ನಿರತ ರಾಗಿದ್ದಾರೋ, ಭಗವಂತನ ಕಡೆಗೆ ಒಂದಿನಿತೂ ಮನಸ್ಸು ಕೊಡುವುದಿಲ್ಲವೋ ಅವರೇ ಬದ್ಧಜೀವರು. ಅವರಿಂದ ಮಹತ್ಕಾರ್ಯವೇನಾದರೂ ಸಾಧ್ಯವಾಗ ಬಲ್ಲುದೇ? ಅವರು ಕಾಗೆ ಕುಟುಕಿದ ಮಾವಿನ ಹಣ್ಣಿನ ಹಾಗೆ, ದೇವರಿಗಂತೂ ಅರ್ಪಿಸಲಾಗುವುದಿಲ್ಲ; ಮನುಷ್ಯರೂ ತಿನ್ನಲು ಹಿಂಜರಿಯುತ್ತಾರೆ.

ಬದ್ಧಜೀವ, ಅಂದರೆ ಸಂಸಾರಜೀವ ರೇಷ್ಮೆಹುಳುವಿನ ಹಾಗೆ. ಇಚ್ಛೆಪಟ್ಟರೆ ಅದು ತನ್ನ ಗೂಡನ್ನು ಕತ್ತರಿಸಿ ಹೊರಕ್ಕೆ ಬರಬಲ್ಲುದು. ಆದರೆ ಅದು ತಾನೆ ಅದನ್ನು ನಿರ್ಮಿಸಿರುವುದರಿಂದ ಮೋಹ ಅಡ್ಡ ಲಾಗಿ ಬಂದು ನಿಂತುಕೊಳ್ಳುತ್ತದೆ. ಕೊನೆಗೆ ಅಲ್ಲೇ ಅದಕ್ಕೆ ಮೃತ್ಯು.

ಮುಕ್ತಜೀವ, ಕಾಮಕಾಂಚನಗಳ ವಶ ಅಲ್ಲ. ಕೆಲಕೆಲವು ರೇಷ್ಮೆ ಹುಳುಗಳು ತಾವು ಅಷ್ಟೊಂದು ಶ್ರಮವಹಿಸಿ ಕಟ್ಟಿದ್ದ ಗೂಡುಗಳನ್ನು ಕತ್ತರಿಸಿ ಹೊರಕ್ಕೆ ಬಂದುಬಿಡುತ್ತವೆ. ಆದರೆ ಅಂಥವೆಲ್ಲೋ ಒಂದೆರಡು.

* ಮಾಯೆ ಜೀವರನ್ನು ಮುಗ್ಧಗೊಳಿಸಿ ತನ್ನ ಬಂಧನದಲ್ಲಿ ಇಟ್ಟುಕೊಳ್ಳುತ್ತದೆ. ಎಲ್ಲೋ ಕೆಲವರಿಗೆ ಮಾತ್ರ ಬ್ರಹ್ಮಜ್ಞಾನ ದೊರೆಯುತ್ತದೆ. ಅವರು ಮಾಯೆಯ ಇಂದ್ರಜಾಲದಿಂದ ಮೋಹಿತರಾಗುವುದಿಲ್ಲ; ಕಾಮಕಾಂಚನಗಳಿಗೆ ವಶರಾಗುವುದಿಲ್ಲ.

* ಯಾರು ನಿತ್ಯಸಿದ್ಧರೋ ಅವರು ಸಂಸಾರಕ್ಕೆ ಕಾಲಿಡಬೇಕಾಗಿ ರುವುದಿಲ್ಲ. ಅವರ ಭೋಗವಾಸನೆ, ಹುಟ್ಟುವುದಕ್ಕೆ ಮುನ್ನವೇ ಪೂರ್ಣಗೊಂಡುಬಿಟ್ಟಿರುತ್ತದೆ. ಅವರು ಆತ್ಮಜಾಗೃತಿ ಹೊಂದಿಯೇ ಪ್ರತಿಯೊಂದು ಸಲ ಜನ್ಮವೆತ್ತುತ್ತಾರೆ. ಇವರನ್ನು ಮುಚ್ಚಿಹೋಗಿರುವ ಬುಗ್ಗೆಗಳಿಗೆ ಹೋಲಿಸಬಹುದು. ಕೊಳಾಯಿಗಾರ ತೋಟದಲ್ಲಿ ಅಲ್ಲಿ ಇಲ್ಲಿ ಅಗೆಯುತ್ತಿರುವಾಗ ಅಕಸ್ಮಾತ್ತಾಗಿ ಆತ ಬುಗ್ಗೆಯ ತಡೆ ಯನ್ನು ತೆಗೆದು ಹಾಕಿಬಿಡಬಹುದು. ಆಗ ನೀರು 'ಭರ್, ಭರ್' ಅಂತ ಹೊರಕ್ಕೆ ನುಗ್ಗಿ ಬರುತ್ತದೆ. ಹಾಗೆ ನಿತ್ಯಸಿದ್ಧರ ಪ್ರಥಮಾನು ರಾಗ ವ್ಯಕ್ತವಾದಾಗ ಜನ ಆಶ್ಚರ್ಯಚಕಿತರಾಗಿ ಹೇಳುತ್ತಾರೆ: ''ಇಷ್ಟೊಂದು ಭಕ್ತಿ, ವೈರಾಗ್ಯ, ಪ್ರೇಮ ಎಲ್ಲಿ ಇತ್ತು?''

ನರೇಂದ್ರ, ಭವನಾಥ, ರಾಖಾಲ ಇವರು ನಿತ್ಯಸಿದ್ಧರ ಗುಂಪಿಗೆ ಸೇರಿದವರು; ಈಶ್ವರಕೋಟಿಗಳು, ಇವರಿಗೆ ಸಾಧನೆ ಅನಾವಶ್ಯಕ.

* ನಿತ್ಯಸಿದ್ಧರು ಒಂದು ಪ್ರತ್ಯೇಕ ಶ್ರೇಣಿಗೆ ಸೇರಿದವರು. ಅವರು ಅರಣಿಕಡ್ಡಿಯ ಹಾಗೆ. ಸ್ವಲ್ಪ ಉಜ್ಜಿದರೇ ಹೊತ್ತಿಕೊಂಡುಬಿಡುತ್ತದೆ. ಉಜ್ಜ ದೆಯೂ ಅದರಿಂದ ಬೆಂಕಿ ಉತ್ಪನ್ನ ಮಾಡ ಬಹುದು. ಸ್ವಲ್ಪ ಸಾಧನೆ ಮಾಡಿದರೆ, ಇನ್ನು ಕೆಲವು ವೇಳೆ ಯಾವ ಸಾಧನೆಯನ್ನೂ ಮಾಡ ದೆಯೆ ನಿತ್ಯಸಿದ್ಧರು ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡು ಬಿಡುತ್ತಾರೆ. ಕುಂಬಳಕಾಯಿ ಅಥವಾ ಸೋರೆಗಿಡದ ಹಾಗೆ, ಮೊದಲು ಕಾಯಿ – ಅನಂತರ ಹೂವು.

* ಸಿದ್ಧರಲ್ಲಿ ಎರಡು ವಿಧ; ಸಾಧನ-ಸಿದ್ಧರು, ಕೃಪಾಸಿದ್ಧರು. ಕೆಲಕೆಲವು ಮಂದಿ ರೈತರು ಬಹಳ ವಾಗಿ ದುಡಿದು ತಮ್ಮ ತಮ್ಮ ಗದ್ದೆಗಳಿಗೆ ನೀರು ಹಾಯಿಸುತ್ತಾರೆ. ಹಾಗೆ ಮಾಡಿದರೇನೇ ಬೆಳೆ ಸಾಧ್ಯ. ಕೆಲಕೆಲವರಿಗೆ ಯಾವ ಸಾಧನೆಯನ್ನೂ ಮಾಡದೆ ಭಗವಂತನ ಸಾಕ್ಷಾತ್ಕಾರ ದೊರೆತು ಬಿಡುತ್ತದೆ. ಅವರಿಗೆ ನಿತ್ಯಸಿದ್ಧರು ಎಂದು ಹೆಸರು. ಜಪತಪಾದಿ ಸಾಧನೆ ಮಾಡಿ ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡಿರತಕ್ಕವರಿಗೆ ಸಾಧನಸಿದ್ಧರೆಂದು ಹೆಸರು. ಮತ್ತೆ ಕೃಪಾಸಿದ್ಧರೆಂಬವರು ಇದ್ದಾರೆ. ಉದಾಹರಣೆಗೆ ಸಹಸ್ರಾರು ವರ್ಷಗಳಿಂದ ಅಂಧಕಾರದಲ್ಲಿ ಮುಳು ಗಿದ್ದ ಕೊಠಡಿಗೆ ಬೆಳಕು ತಂದರೆ ಅದು ಒಡನೆಯೇ ಬೆಳಗುವು ದಿಲ್ಲವೇ? ಹಾಗೇ ಇವರೂ ಕೂಡ.

ಮತ್ತೂ ಕೆಲವರು ಇದ್ದಾರೆ, ಹಠಾತ್ ಸಿದ್ಧರೆಂಬುವರು. ಇವರ ವಿಷಯ ಹೇಗೆಂದರೆ ಒಬ್ಬ ಬಡ ಹುಡುಗನ ಮೇಲೆ ಧನಿಕನ ಕಣ್ಣು ಬಿದ್ದಂತೆ. ಹುಡುಗನಿಗೆ ಮಗಳನ್ನು ಕೊಟ್ಟು ವಿವಾಹ ಮಾಡಿ, ಮನೆ-ಮಠ, ಆಸ್ತಿ-ಪಾಸ್ತಿ, ಕುದುರೆಗಾಡಿ, ಸೇವಕ-ಸೇವಕಿಯರು ಇತ್ಯಾದಿಗಳನ್ನು ವರದಕ್ಷಿಣೆಯಾಗಿ ಕೊಟ್ಟುಬಿಡುತ್ತಾನೆ.

ಇನ್ನು ಕೆಲವರು ಇದ್ದಾರೆ, ಸ್ವಪ್ನಸಿದ್ಧರೆಂಬರು. ಇವರಿಗೆ ಸ್ವಪ್ನದಲ್ಲಿ ಭಗವಂತನ ದರ್ಶನ ದೊರೆತುಬಿಟ್ಟಿರುತ್ತದೆ.

* ಕರ್ತಾಭಜಾ ಸಂಪ್ರದಾಯದವರು ಭಕ್ತರನ್ನು ಪ್ರವರ್ತಕ, ಸಾಧಕ, ಸಿದ್ಧ, ಸಿದ್ಧರ ಸಿದ್ಧ ಎಂಬುದಾಗಿ ನಾಲ್ಕು ಪಂಗಡಗಳಾಗಿ ವಿಂಗಡಿಸುತ್ತಾರೆ. **ಪ್ರವರ್ತಕ** ಓದುತ್ತಾನೆ, ಕೇಳುತ್ತಾನೆ. ಎರಡನೆ ಯದು **ಸಾಧಕ**ನ ಹಂತ. ಆತ ಭಗವಂತನಿಗೆ ಪ್ರಾರ್ಥನೆ ಸಲ್ಲಿಸು ತ್ತಾನೆ, ಧ್ಯಾನ-ಚಿಂತನೆ ಮಾಡುತ್ತಾನೆ, ನಾಮಗುಣಕೀರ್ತನೆ ಮಾಡುತ್ತಾನೆ. ಮೂರನೆಯ ಹಂತ **ಸಿದ್ಧ**ನದು, ಭಗವಂತನನ್ನು ತನ್ನ ಅಂತರ್ಯದಲ್ಲಿ ಅರಿತುಕೊಂಡಿರುತ್ತಾನೆ, ದರ್ಶನ ಮಾಡಿಕೊಂಡಿರು ತ್ತಾನೆ. ಕೊನೆಯ ಹಂತ **ಸಿದ್ಧರ ಸಿದ್ಧ**ನದು. ಉದಾಹರಣೆಗೆ ಚೈತನ್ಯ ನದು. ಕೆಲವು ವೇಳೆ ವಾತ್ಸಲ್ಯಭಾವದಿಂದ ಇರುತ್ತಾನೆ, ಇನ್ನು ಕೆಲವು ವೇಳೆ ಮಧುರಭಾವದಿಂದ ಇರುತ್ತಾನೆ.

**ಶ್ರೀರಾಮಕೃಷ್ಣ ವಚನವೇದ** ದಿಂದ



# ಸ್ವಾಮಿ ವಿವೇಕಾನಂದರ ಚಾಮುಂಡೇಶ್ವರಿ ದೇಗುಲ ದರ್ಶನ

## -ಒಂದು ಅಧಿಕೃತ ಮಾಹಿತಿ-

ಸಿ.ಎಸ್.ಮಂಗಳಮ್ಮ

ಸ್ವಾಮಿ ವಿವೇಕಾನಂದರು ಮೈಸೂರಿಗೆ ಭೇಟಿ ನೀಡಿರುವುದು ಚಾರಿತ್ರಿಕ ಘಟನೆ. ಆದರೆ ಅವರು ಚಾಮುಂಡಿ ಬೆಟ್ಟಕ್ಕೆ ಭೇಟಿ ನೀಡಿದ ವಿಚಾರ ಇಲ್ಲಿಯವರೆಗೆ ಕೇವಲ ಊಹೆಯಷ್ಟೇ ಆಗಿತ್ತು; ಅದಕ್ಕೆ ಯಾವುದೇ ದಾಖಲೆ ಲಭ್ಯವಿರಲಿಲ್ಲ. ಅಧಿಕೃತ ಮಾಹಿತಿಯೊಂದಿಗೆ ಈ ಐತಿಹಾಸಿಕ ಸತ್ಯವನ್ನು ದಾಖಲಿಸಿರುವ ಲೇಖಕಿ, ಹಳೆಯ ತಲೆಮಾರಿನ (ಪ್ರತ್ಯಕ್ಷದರ್ಶಿಗಳ) ಕೊಂಡಿಯಾಗಿದ್ದಾರೆ. ಅವರು ಮೈಸೂರು ಆಶ್ರಮದ ಭಕ್ತರು ಹಾಗೂ ಉತ್ತಮ ಲೇಖಕಿ.

ಒಂದು ದಿನ ಮೈಸೂರು ಚಾಮುಂಡಿ ಬೆಟ್ಟದ ಶ್ರೀಚಾಮುಂಡೇಶ್ವರಿ ದೇವಸ್ಥಾನದಲ್ಲಿ ಅರ್ಚಕರೊಬ್ಬರು ತಮ್ಮ ಪಾಲಿನ ಸೇವೆಯನ್ನು ಅಮ್ಮನವರಿಗೆ ಸಲ್ಲಿಸಿ, ಮನೆಗೆ ಬಂದು, ತಮ್ಮ ತಾಯಿಗೆ ಹೇಳಿದರು: ''ಅಕ್ಕಾ, ಇಂದು ಒಂದು ವಿಶೇಷ ಸುದ್ದಿ ಕೇಳು. ಬೆಳಗ್ಗೆ ಒಬ್ಬ ಸಂನ್ಯಾಸಿ ದೇವಸ್ಥಾನಕ್ಕೆ ಬಂದಿದ್ದ. ಸುಮಾರು ಮೂವತ್ತು ವಯಸ್ಸಿನ ಒಳಗೆ ಇದ್ದಿರಬಹುದು. ದೇವಸ್ಥಾನದ ಒಳಕ್ಕೆ ಬರುತ್ತಿದ್ದಂತೆಯೇ ದೇವಸ್ಥಾನದ ಕೆಲಸಗಾರರು, ಪರಿಚಾರಕರು, ಇತರೇ ಕೆಲಸ ಮಾಡುತ್ತಿದ್ದವರೂ, ದೇವಸ್ಥಾನಕ್ಕೆ ಬಂದಿದ್ದ ಭಕ್ತರೂ ಎಲ್ಲರೂ ಏನೋ ಅದ್ಭುತವನ್ನು ಕಂಡವರಂತೆ, ಅರ್ಚಕರೂ ಸೇರಿ ಬೆಕ್ಕಸ ಬೆರಗಾಗಿ ನಿಂತುಬಿಟ್ಟರು. (ಆಗ ಈಗಿನಂತೆ ಜನಸಂದಣಿ ಇರುತ್ತಿರಲಿಲ್ಲ. ಬೆಳಗಿನ ಝಾವ ಬೆಟ್ಟವನ್ನು ಹತ್ತಿ ಬರುವ ಕೆಲವು ಭಕ್ತರು, ಬೆಟ್ಟದ ಮೇಲೆ ವಾಸಿಸುವವರಲ್ಲಿ ಕೆಲವರು ಅಷ್ಟೆ.) ಶಾಂತ ವಾತಾವರಣ. ಒಂದೆರಡು ಕ್ಷಣ ಮೌನವೇ! ಯಾರಿಗೂ ಮಾತೇ ಹೊರಡದು. ಸಂನ್ಯಾಸಿ ಸೀದಾ ಹೆಬ್ಬಾಗಿಲಿನಿಂದ ಗಂಭೀರವಾದ ನಡಿಗೆಯಲ್ಲಿ ಗರ್ಭಗುಡಿಯವರೆಗೂ ಬಂದು, ನಿಂತು ಅಮ್ಮನವರನ್ನು ತದೇಕದೃಷ್ಟಿಯಿಂದ ನೋಡುತ್ತ, ಸಾಷ್ಟಾಂಗ ಪ್ರಣಾಮ ಮಾಡಿ ಎದ್ದು ನಿಂತ.

''ಈ ವೇಳೆಗೆ ಅರ್ಚಕರೂ ಮೈಮರೆವಿನಿಂದ ಎಚ್ಚೆತ್ತು, ದೇವಿಗೆ ಮಂಗಳಾರತಿ ಮಾಡಿ, ಸಂನ್ಯಾಸಿಗೆ ಕೊಟ್ಟು, ಜೊತೆಗೆ ತೀರ್ಥ, ಹೂ ಪ್ರಸಾದವನ್ನೂ ನೀಡಿದರು. ಸಂನ್ಯಾಸಿ ಯಾರ ಜೊತೆಯಲ್ಲಿಯೂ ಮಾತನಾಡಿದಂತೆ ಕಾಣಿಸಲಿಲ್ಲ. ಪುನಃ ದೇವಸ್ಥಾನದ ಪ್ರದಕ್ಷಿಣೆ ಮಾಡಿ ಹೊರಟ. ಎಲ್ಲಿಂದ ಬಂದ, ಯಾರು ಅವನು? ಎಂದು ಯಾರಿಗೂ ಕೇಳಬೇಕೆಂದೆನಿಸಲಿಲ್ಲ. ಅವನನ್ನು ನೋಡುತ್ತಿರುವುದೇ ಒಂದು ಸಂಭ್ರಮವೆನಿಸಿತ್ತು. ಆಜಾನುಬಾಹು, ಗಂಭೀರ ನಡಿಗೆ, ಧೀರೋದಾತ್ತ ಆಕಾರ, ತೇಜಃಪುಂಜ ಮುಖ, ವಿಶಾಲವಾದ ಕಣ್ಣುಗಳು. ಆ ಕಣ್ಣುಗಳಲ್ಲಿ ಏನೋ ವಿಶೇಷ ಆಕರ್ಷಣೀಯವಾದ ದೃಷ್ಟಿ, ಜೊತೆಗೆ ಕಾವಿಯ ಉಡುಪು, ಎಲ್ಲವೂ ಸೇರಿ ಅವನೊಬ್ಬ ಸಾಮಾನ್ಯ ಸಂನ್ಯಾಸಿಯಲ್ಲ ಎನ್ನುವ ಭಾವನೆ ಮನಸ್ಸಿನಲ್ಲಿ ಉಂಟಾಯಿತು. ಇಂದು ಒಬ್ಬ ಮಹಾನ್ ವ್ಯಕ್ತಿಯ ದರ್ಶನಲಾಭ ಆಯಿತೆನ್ನಬಹುದು. ಆ ರೂಪ ಮನಸ್ಸಿನಲ್ಲಿ ಅಚ್ಚೊತ್ತಿದ ಹಾಗಿದೆ'' ಎಂದರಂತೆ. ಮುಂದೆ ಕೆಲವು ವರ್ಷಗಳ ನಂತರ ಅವರೇ ವಿಶ್ವವಿಖ್ಯಾತರಾದ, ಸ್ವಾಮಿ ವಿವೇಕಾನಂದರೆಂದು ತಿಳಿಯಿತೆಂದು ಹೇಳುತ್ತಿದ್ದರು. ಲೋಕಕಲ್ಯಾಣಕ್ಕಾಗಿ ಅವರೊಂದು ಸಾಧು-ಸಂತರ ಸಂಘ ಸ್ಥಾಪಿಸಿದ್ದಾರೆಂದೂ ಗೊತ್ತಾಯಿತೆಂದು ನಮಗೆ ಹೇಳುತ್ತಿದ್ದರು. ನಮ್ಮ ಅಜ್ಜಿ ತಮ್ಮ ಮೊಮ್ಮಕ್ಕಳಿಗೆ ಸಮಯ ಸಿಕ್ಕಾಗ ಸಂನ್ಯಾಸಿಯ ವಿಷಯ ಹೇಳಿ ಆನಂದಪಡುತ್ತಿದ್ದರೆಂದು ನನ್ನ ಅಣ್ಣ, ಅಕ್ಕ ಹೇಳುತ್ತಿದ್ದರು. (ನಮ್ಮ ತಂದೆಯವರಿಗೆ ಆಗ ೧೯ ಅಥವಾ ೨೦ ವಯಸ್ಸು.)

ಈ ಘಟನೆ ನಡೆದದ್ದು ೧೮೯೨ರ ವರ್ಷಾಂತ್ಯದಲ್ಲಿ. ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಕರ್ನಾಟಕಕ್ಕೆ ಬಂದಾಗ, ಮೈಸೂರಿಗೂ ದಯಮಾಡಿಸಿದರು. ಇವರ ವ್ಯಕ್ತಿತ್ವಕ್ಕೆ ಮಾರುಹೋಗಿ ಆಗಿನ ದಿವಾನರು, ಮೈಸೂರು ಮಹಾರಾಜರಾದ ಚಾಮರಾಜ ಒಡೆಯರ್ ಅವರಿಗೆ ಪರಿಚಯಿಸಿದರು. ಮಹಾರಾಜರ ಅತಿಥಿಯಾಗಿದ್ದಾಗ ಬೆಟ್ಟಕ್ಕೆ ಅಮ್ಮನವರ ದರ್ಶನಕ್ಕೆ ಬಂದಾಗ ನಡೆದ ಘಟನೆಯಿದು. ಇದರಲ್ಲಿ ವಿಶೇಷವೆಂದರೆ ಅಂದು ನಮ್ಮ ತಂದೆಯವರನ್ನು ಆಕರ್ಷಿಸಿದ ಸ್ವಾಮೀಜಿಯವರ ವ್ಯಕ್ತಿತ್ವ ಸೆಳೆತದ ನಂಟು ನಮ್ಮ ಮನೆಯವರಿಗೂ ರಾಮಕೃಷ್ಣ ಆಶ್ರಮಕ್ಕೂ ಸಂಬಂಧ ಬೆಳೆಯಲು ಮೂಲ ಎನ್ನಬಹುದು.

ನನಗೆ ಈ ವಿಷಯ ತಿಳಿದದ್ದು ೧೯೩೪ರಲ್ಲಿ, ನಮ್ಮ ತಂದೆಯವರಿಂದಲೇ ಕೇಳಿದ್ದೆ. ನನ್ನ ತಂದೆಯವರು ವಾಸವಾಗಿದ್ದದ್ದು ಚಾಮುಂಡಿಬೆಟ್ಟದಲ್ಲಿ, ಚಾಮುಂಡೇಶ್ವರಿಯ ಸನ್ನಿಧಿಯಲ್ಲಿ. ಪ್ರತಿನಿತ್ಯ 'ದುರ್ಗಾಸಪ್ತಶತಿ'ಯ ಪಾರಾಯಣದ ಸೇವೆ ಅವರ ಪಾಲಿಗೆ ಒದಗಿ ಬಂದಿತ್ತು. ಶ್ರದ್ಧೆ, ಭಕ್ತಿಯಿಂದ ತಮ್ಮ ಸೇವೆಯನ್ನು

ಅಮ್ಮನವರಿಗೆ ಸಲ್ಲಿಸುತ್ತಿದ್ದರೆಂದು ದೇವಸ್ಥಾನದ ಅರ್ಚಕರಾದಿಯಾಗಿ ಹೇಳುತ್ತಿದ್ದುದನ್ನು ನಾನೂ ಕೇಳಿದ್ದೆ. ಧನಸಂಪತ್ತಿನಲ್ಲಿ ಕೊರತೆ ಇದ್ದರೂ, ಸರಳಜೀವಿಗಳೂ, ಸಂತೃಪ್ತರೂ ಆಗಿ ಬಾಳಿದವರು. ಜನಾದರಣೀಯರು, ಸುಸಂಸ್ಕೃತರೂ ಆಗಿದ್ದರು. ಚಾಮುಂಡಿ ಬೆಟ್ಟದಲ್ಲಿ ನಮ್ಮ ತಂದೆ ಅವರ ತಂದೆ, ತಾಯಿ, ಹಾಗೂ ಇಬ್ಬರು ತಮ್ಮಂದಿರೊಡನೆ (ಒಟ್ಟು ಕುಟುಂಬ) ವಾಸಿಸುತ್ತಿದ್ದರು. ನಮ್ಮ ಚಿಕ್ಕಪ್ಪಂದಿರೂ ದೇವಸ್ಥಾನದಲ್ಲಿಯೇ ಸೇವೆ ಸಲ್ಲಿಸುತ್ತಿದ್ದರು. ಒಬ್ಬರು ದೇವಸ್ಥಾನದ ಮಹಾದ್ವಾರವನ್ನು ಪ್ರವೇಶಿಸುತ್ತಿದ್ದ ಹಾಗೇ ಬಲ ಭಾಗದಲ್ಲಿ ಇರುವ ಗಣಪತಿಯ ಅರ್ಚಕರಾಗಿದ್ದರು. ಇನ್ನೊಬ್ಬರು ಅಮ್ಮನವರ ಉತ್ಸವ ಸಮಯಗಳಲ್ಲಿ ಹಾಗೂ ದೇವಸ್ಥಾನದ ಇತರ ಕೆಲಸಗಳಲ್ಲಿ ಭಾಗವಹಿಸುತ್ತಿದ್ದರು. ಅವರೆಲ್ಲ ಅಮ್ಮನ ಕೃಪಾಛಾಯೆಯಲ್ಲಿಯೇ ಬಾಳಿದವರು.

ಮೈಸೂರಿನ ದೇವೀಭಕ್ತರೊಬ್ಬರು ಬೆಟ್ಟಕ್ಕೆ ಅಮ್ಮನವರ ದರ್ಶನಕ್ಕೆ ವಾಡಿಕೆಯಂತೆ ಬರುತ್ತಿದ್ದರು. ಅವರು ನಮ್ಮ ತಂದೆಯವರಿಗೆ ಪರಿಚಿತರೂ ಆದರು. ಅವರು ಶ್ರೀಮಂತರು, ಮೈಸೂರಿನ ಪುರಸಭೆಯ ಸದಸ್ಯರೂ ಆಗಿದ್ದರು. ದಾನಿಗಳು, ಉದಾರ ಮನಸ್ಸಿನವರು, ದೈವಭಕ್ತರು. ಬೆಟ್ಟದಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಿಲ್ಲದೆ ಕಷ್ಟಪಡುತ್ತಿದ್ದ ನಮ್ಮ ತಂದೆಯವರನ್ನು ಕಂಡು, ''ಶಾಸ್ತ್ರಿಗಳೇ, ನೀವು ಅನ್ಯಥಾ ಭಾವಿಸದಿದ್ದರೆ ನನ್ನದೊಂದು ಸಲಹೆ ಹಾಗೂ ಕೋರಿಕೆ ಇದೆ'' ಎಂದರಂತೆ. ನಮ್ಮ ತಂದೆ ಹಣಬಲವಿಲ್ಲದಿದ್ದರೂ ಸ್ವಾಭಿಮಾನಿಗಳು, ಅಲ್ಪತೃಪ್ತರು. ಅದರ ಪರಿಚಯ ಆ ಭಕ್ತರಿಗೂ ಇತ್ತು. ಆದ್ದರಿಂದಲೇ ಬಹಳ ಸಂಕೋಚದಿಂದ ತಮ್ಮ ಭಾವನೆಯನ್ನು ತಿಳಿಸಿದರು. ನಮ್ಮ ತಂದೆಯ ಒಪ್ಪಿಗೆ ಸಿಕ್ಕಿದ ಮೇಲೆ, ''ಶಾಸ್ತ್ರಿಗಳೇ, ಓದುವುದಕ್ಕಾಗಿ ಹುಡುಗ ನಿತ್ಯ ಬೆಟ್ಟದಿಂದ ಬಂದು ಹೋಗುವುದು ಬಹಳ ಶ್ರಮದಾಯಕವಾದದ್ದು. ನಮ್ಮ ಮನೆಯ ಆವರಣದಲ್ಲಿ ೩-೪ ಚಿಕ್ಕ ಮನೆಗಳಿವೆ. ಅದರಲ್ಲಿ ಒಂದನ್ನು ನಿಮ್ಮ ವಾಸಕ್ಕಾಗಿ ಕೊಡುತ್ತೇನೆ. ಯಾರಾದರೊಬ್ಬರು ಹಿರಿಯರು ಇಲ್ಲಿ ಇದ್ದುಕೊಂಡು, ಓದುವ ವಿದ್ಯಾರ್ಥಿಯನ್ನೂ, ಜೊತೆಗೆ ನಿಮ್ಮ ಇತರ ಮಕ್ಕಳನ್ನೂ ನೋಡಿಕೊಂಡರೆ ಉತ್ತಮವೆನಿಸುತ್ತದೆ. ಇಲ್ಲೊಂದು ಚಿಕ್ಕ ಸಂಸಾರವಿದ್ದರೆ ಮುಂದೆ ಅನುಕೂಲವಾಗುತ್ತೆ'' ಎಂದಾಗ, ನಮ್ಮ ತಂದೆಯವರು, ''ತಾಯಿಯ ಕೃಪೆ ಹೇಗೆ ಒದಗಿ ಬರುತ್ತದೆ ಎಂಬುದು ನಮಗೆ ಗೊತ್ತಾಗುವುದಿಲ್ಲ. ಮನೆಯಲ್ಲಿ ವಿಚಾರಿಸಿ ತಿಳಿಸುತ್ತೇನೆ'' ಎಂದು ಹೇಳಿದರಂತೆ.

ಮನೆಯಲ್ಲಿ ಈ ಬಗ್ಗೆ ಎಲ್ಲರೊಡನೆ ಆಲೋಚಿಸಿ ಒಂದು ತೀರ್ಮಾನಕ್ಕೆ ಬಂದರು. ನಮ್ಮ ತಾಯಿ ಮಕ್ಕಳ ಜೊತೆಯಲ್ಲಿ ಮೈಸೂರಿನಲ್ಲಿ ಇರುವುದೆಂದೂ, ತಂದೆಯವರೋ, ಚಿಕ್ಕಪ್ಪಂದಿರೋ ಆಗಾಗ್ಗೆ ಬಂದು ಯೋಗಕ್ಷೇಮ ನೋಡಿಕೊಂಡು ಮನೆಗೆ ಬೇಕಾದ್ದನ್ನು ಒದಗಿಸಿ ಕೊಡುವುದೆಂದೂ ನಿಶ್ಚಯಿಸಿ, ಮೈಸೂರಿನಲ್ಲಿ ವಾಸಕ್ಕೆ ಬಂದರು. ಈ ರೀತಿ ಸಹಾಯ ಮಾಡಿದವರು ಶ್ರೀಮಾನ್, ವಾಸುದೇವಯ್ಯ ಎನ್ನುವವರು. ಅವರು ಮೈಸೂರಿನ ಸಂಸಾರಕ್ಕೂ ಸಾಕಷ್ಟು ಸಹಾಯ ಮಾಡುತ್ತಿದ್ದರಂತೆ.

೧೯೩೪ನೇ ಇಸವಿ ಬಹುಶಃ ಏಪ್ರಿಲ್ ತಿಂಗಳಿರಬಹುದು. ಒಂಟಿಕೊಪ್ಪಲಿನ (ಈಗ ವಿ.ವಿ.ಮೊಹಲ್ಲ) ೬ನೇ ಅಡ್ಡರಸ್ತೆಯಲ್ಲಿ ಒಂದು ಗೃಹಪ್ರವೇಶ ಸಮಾರಂಭ. ಅಲ್ಲಿಗೆ ನಾನು ನನ್ನ ತಾಯಿ, ತಂದೆಯವರ ಜೊತೆ ಹೋಗಿದ್ದೆ. ನೂರಡಿ ರಸ್ತೆಯಿಂದ ಕುಕ್ಕರಹಳ್ಳಿ ಕೆರೆ ಏರಿ ಮಾರ್ಗವಾಗಿ, ಕಾಲ್ನಡಿಗೆಯಲ್ಲಿ ಹೋಗಿದ್ದೆವು. ಅಲ್ಲಿನ ಸಮಾರಂಭ ಮುಗಿಸಿಕೊಂಡು ಬರುವಾಗ ವೆಂಕಟರಮಣಸ್ವಾಮಿ ದೇವಸ್ಥಾನದ ಕಡೆಯಿಂದ ಬಂದೆವು. ಮುಂದೆ 'ಶ್ರೀರಾಮಕೃಷ್ಣ ಆಶ್ರಮ' ಎಂದು ಬೋರ್ಡು ಕಾಣಿಸಿತು. ತಂದೆಯವರು ಅಲ್ಲಿ ನಿಂತುಕೊಂಡರು. ನಾನೂ ಪಕ್ಕದಲ್ಲಿಯೇ ನಿಂತೆ, ''ಇದು ರಾಮಕೃಷ್ಣ ಆಶ್ರಮ, ಲೋಕಹಿತಕ್ಕಾಗಿ ಕಟ್ಟಿದ ಸಾಧು-ಸಂತರ ಸಂಘದ ಒಂದು ಶಾಖೆ. ಇದಕ್ಕೆ ಸಂಬಂಧಪಟ್ಟಂತೆ ನಡೆದ ಒಂದು ಘಟನೆ ಹೇಳುತ್ತೇನೆ.'' ಎಂದು ಅವರು ೪೦-೪೨ ವರ್ಷಗಳ ಹಿಂದೆ ಚಾಮುಂಡಿ ಬೆಟ್ಟದಲ್ಲಿ ಅಮ್ಮನವರ ಸನ್ನಿಧಿಯಲ್ಲಿ ಸ್ವಾಮಿ ವಿವೇಕಾನಂದರನ್ನು ಕಂಡ ಘಟನೆಯನ್ನು ವಿವರಿಸಿದರು.

೧೯೩೬ರಲ್ಲಿ ನನ್ನ ಹಿರಿಯಣ್ಣ (ಸರ್ಕಾರಿ ನೌಕರಿಯಲ್ಲಿದ್ದರು) ನವರಿಗೆ ಬೆಂಗಳೂರಿಗೆ ವರ್ಗವಾಯಿತು. ತಮ್ಮಂದಿರ ವಿದ್ಯಾಭ್ಯಾಸಕ್ಕೆ ಅನುಕೂಲಕವಾಯಿತೆಂದು, ನಮ್ಮ ತಾಯಿಯವರೂ ನಾನೂ ಸಹ ಅವರ ಸಂಸಾರದ ಜೊತೆಗೇ ಬೆಂಗಳೂರಿಗೆ ಹೋದೆವು. ನಮ್ಮ ಮನೆ ಬಸವನಗುಡಿಯ ರಾಮಕೃಷ್ಣ ಆಶ್ರಮಕ್ಕೆ ಹತ್ತಿರವಿತ್ತು. ನಾನು ಶಾಲೆಯಿಂದ ಬಂದವಳೇ ನಿತ್ಯ ಆಶ್ರಮಕ್ಕೆ ಹೋಗುತ್ತಿದ್ದೆ. ಇಬ್ಬರು ಅಣ್ಣಂದಿರೂ (ಮುಂದೆ ಸ್ವಾಮಿ ಅನನ್ಯಾನಂದ, ಸ್ವಾಮಿ ಸ್ಥಿತಾತ್ಮಾನಂದ) ಆಶ್ರಮದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅವರು ಮುಂದೆ ಮಹಾಸಂಘದ ಸದಸ್ಯರಾಗಿ ಸೇವೆ ಸಲ್ಲಿಸಿ ಧನ್ಯರಾಗಿದ್ದಾರೆ. ನನ್ನ ಹಿರಿಯಣ್ಣನವರೂ ಸಹ ೧೯೨೩-೨೪ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಓದುತ್ತಿದ್ದಾಗ, ಪ್ರತಿ ಭಾನುವಾರ ಉಪನ್ಯಾಸಕ್ಕೆ ಆಶ್ರಮ ಹೋಗುತ್ತಿದ್ದರಂತೆ. ಬಹುಶಃ ನಮ್ಮ ತಂದೆಯವರಿಂದ ಕೇಳಿದ್ದ ಸಂನ್ಯಾಸಿಯ ವಿಷಯವನ್ನು ನಮ್ಮ ಅಜ್ಜಿ ಅವರಿಗೆ ತಿಳಿಸಿದ್ದರೆಂದು ಕಾಣುತ್ತದೆ. ಅದು ನಮ್ಮ ಅಕ್ಕನವರಿಗೂ ಗೊತ್ತಿತ್ತು. ಸ್ವಾಮಿ ಅನನ್ಯಾನಂದರು ೧೯೩೯ರಲ್ಲಿ, ಸ್ವಾಮಿ ಸ್ಥಿತಾತ್ಮಾನಂದರು ೧೯೪೨ರಲ್ಲಿ ರಾಮಕೃಷ್ಣ ಮಹಾಸಂಘಕ್ಕೆ ಸೇರಿದ ವಿಷಯ ಗೊತ್ತಾದ ಮೇಲೆ ಅವರು ಈ ವಿಷಯ ಹೇಳುತ್ತಿದ್ದರು. ''ಬೆಟ್ಟದಲ್ಲಿ ಅಮ್ಮನವರ ಸನ್ನಿಧಿಯಲ್ಲಿ ಕಂಡ ಸಂನ್ಯಾಸಿಯ ಆಕರ್ಷಕ ವ್ಯಕ್ತಿತ್ವ, ವಿಶೇಷ ಕಾಂತಿಯುಕ್ತವಾದ ಕಣ್ಣಿನ ಸೆಳೆತದ ಮಹಿಮೆ ಇರಬಹುದು, ನಮ್ಮ ಮನೆಯವರಿಗೆ ರಾಮಕೃಷ್ಣಾಶ್ರಮದ ಸಂಪರ್ಕಕ್ಕೆ ಮೂಲಕಾರಣ'' ಎಂದು ಆಗಾಗ್ಗೆ ನನಗೆ ಹೇಳುತ್ತಿದ್ದರು. ಯೋಚಿಸಿದರೆ ಇರಬಹುದೇನೋ ಎನಿಸುತ್ತದೆ. ✷




# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ-೬

**ನಾ**ನು ಟಿಬೆಟ್ಟಿನ ಪೋಷಾಕು ಧರಿಸಿ ಓಡಾಡಿದ್ದೇನೆ. ಕಾಶ್ಮೀರದಲ್ಲಿ ಪೋಲೀಸರು ನನ್ನನ್ನು ತಡೆದರು, ದಸ್ತಗಿರಿ ಮಾಡಿದರು. ನನ್ನ ದೇನಾದರೂ political ಉದ್ದೇಶವಿರಬೇಕೆಂದು ಸರ್ಕಾರದ ಭಾವನೆ. ನನ್ನ ಟಿಬೆಟಿಯನ್ ಭಾಷೆಯನ್ನು ಕೇಳಿ ಅವರಿಗೆ ಇನ್ನಷ್ಟು ಸಂದೇಹ. ''ಅವರೇಕೆ ನಿನ್ನನ್ನು ಅಷ್ಟು ಭಕ್ತಿಯಿಂದ ಕಾಣುತ್ತಾರೆ?'' ಎಂದು ಕೇಳಿದಾಗ ನಾನೆಂದೆ, ''ಆ ವಿಚಾರ ಅವರನ್ನೇ ಕೇಳಿ. ನಾನು ಬಂಗಾಳಿ ಸಂನ್ಯಾಸಿ. ವರಾಹನಗರದಲ್ಲಿ ನಮ್ಮ ಮಠವಿದೆ. ನನ್ನನ್ನು ಬಿಟ್ಟುಬಿಡದಿದ್ದರೆ ಉಪವಾಸ ಆರಂಭಿಸುತ್ತೇನೆ.'' ಜೈಲಿನಲ್ಲಿ ನಾನು ಏನನ್ನೂ ತಿನ್ನುತ್ತಿರಲಿಲ್ಲ. ನನ್ನನ್ನು ಬಿಡಿಸಲು ಹವಾಲ್ದಾರ ತುಂಬಾ ಪ್ರಯತ್ನಪಟ್ಟ. ಅವನ ಹೆಂಡತಿ ಎಷ್ಟು ಹೇಳಿದಳು: ''ಮಹಾರಾಜ್, ತಿನ್ನಿ; ಇಲ್ಲದಿದ್ದರೆ ನಮಗೆ ಕೆಡುಕಾಗುತ್ತದೆ. ಚಿಕ್ಕ ಹುಡುಗರಂತಾಡುತ್ತೀರಲ್ಲ! ನನ್ನನ್ನು ತಾಯಿಯೆಂದು ತಿಳಿದು ನನ್ನ ಮಾತನ್ನು ಕೇಳಿ.'' ಆಕೆ ಅಳುತ್ತಿದ್ದಳು. ನಾನೆಂದೆ, ''ಜನ್ಮವಿತ್ತ ತಾಯ ಕಣ್ಣೀರಿಳಿಸಿ ಬಂದಿದ್ದೇನೆ. ನಿನ್ನ ಕಣ್ಣೀರಿನಿಂದ ವಿಚಲಿತನಾಗುವ ಸಾಧು ನಾನಲ್ಲ.''

ಕಡೆಗೆ ಅವರ ಸಣ್ಣ ಮಗ, ಸಂಜೆ ಯಾರಿಗೂ ಕಾಣದಂತೆ, ಒಂದೂವರೆ ಪೈಸೆ ಕೊಟ್ಟು ಕೊಂಡುಕೊಂಡ ಚಹಾ ಹಾಗೂ ಸೇಬುಹಣ್ಣನ್ನು ತಂದು ಕಿಟಕಿಯಿಂದ ಕೊಟ್ಟಾಗ ನನಗೆ ತಡೆಯಲು ಸಾಧ್ಯವಾಗಲಿಲ್ಲ. ''ಸಾಧೂಜಿ, ದಾದಾಜಿ, ತಿನ್ನಿರಿ'' ಎನ್ನತೊಡಗಿದಾಗ ನನ್ನ ಕಣ್ಣುಗಳಲ್ಲಿ ನೀರು ಬಂತು. ಅವನು ಕೊಟ್ಟ ವಸ್ತುಗಳನ್ನು ತಿಂದೆ. ಅನಂತರ, ರಾಜಕೀಯಕ್ಕೂ ನನಗೂ ಯಾವ ಸಂಬಂಧವೂ ಇಲ್ಲ ಎಂದು ಅವರು ತಿಳಿದುಕೊಂಡರು. ಆಗ ನನ್ನ ಬಿಡುಗಡೆಯಾಯಿತು. ಆದರೆ ಪೋಲೀಸರು ನನ್ನನ್ನು ಬಿಡಲಿಲ್ಲ, ಬಾಲಿಯಲ್ಲಿ (ಕಲ್ಕತ್ತೆಯ ಒಂದು ಪ್ರದೇಶ) ಇಳಿಯುತ್ತಿದ್ದಂತೆ ನನ್ನನ್ನು ಹಿಡಿದರು, ವರಾಹನಗರ ಮಠವನ್ನು ತಲುಪಿಸಿದರು.

**೧೯೩೬ರ, ಜ್ಯೇಷ್ಠ, ರವಿವಾರ:** ಸಾರಗಾಛಿಯಲ್ಲಿ ಶ್ರೀರಾಮಕೃಷ್ಣರ ಜಯಂತಿಯ ದಿನ. ಮಧ್ಯಾಹ್ನದ ಹೊತ್ತು ಭಕ್ತನೊಬ್ಬನು ವಾರ್ತಾ ಪತ್ರಿಕೆಯನ್ನು ತಂದಿದ್ದಾನೆ. ಅದರಲ್ಲಿ ವೈಷ್ಣವ ಪ್ರಚಾರಕರೊಬ್ಬನ ಭಾಷಣ ಪ್ರಕಟವಾಗಿದೆ. ರಾಮಕೃಷ್ಣರು ಹಿಸ್ಟಿರಿಯಾ ರೋಗಿ, ಹಿಪ್ನಾಟಿಸಂ ತಿಳಿದವರು, ವಿವೇಕಾನಂದರು ಅವರ ಗೂಂಡಾ ಎಂದೆಲ್ಲ ಅವನು ಹೇಳಿದ್ದ. ಭಕ್ತ ಎರಡು ಮೂರು ಬಾರಿ ಅದರತ್ತ ಬಾಬಾ ಮನಸ್ಸನ್ನು ಸೆಳೆಯುವ ಪ್ರಯತ್ನ ಮಾಡಿದ. ಪತ್ರಿಕೆಯಲ್ಲಿ ಇದರ ವಿರುದ್ಧ ವಾದಿಸಬೇಕೆಂದೂ ಕೇಳಿಕೊಂಡ. ಕೊನೆಯಲ್ಲಿ ಬಾಬಾ ಹೇಳಿದರು, ''ಅಯ್ಯೋ ಹುಚ್ಚ, ಅದನ್ನು ಯಾರಾದರೂ



ನೋಡುತ್ತಾರೇನು, ಅಥವಾ ಓದುತ್ತಾರೇನು? ನೀಚರು ಮಹಾತ್ಮರ ಬಗ್ಗೆ ಮಾತನಾಡಿದರೆ, ಬುದ್ಧಿವಂತರು ಅದನ್ನ ನೋಡಿ ನಗುತ್ತಾರೆ ಅಷ್ಟೆ. ಯಾರಾದರೂ ಒಂದು ಕೃಷ್ಣ ಲಂಪಟನೆಂದು ಹೇಳಿದರೆ ಅವನ ಮಾತನ್ನು ಸುಮ್ಮನೆ ಕೇಳಬೇಕೇ ಅಥವಾ ಪ್ರತಿವಾದ ಮಾಡಬೇಕೆ? ತಿಳಿದವರಿಗೆ ಹೇಗೋ ತಿಳಿದಿದೆ. ತಿಳಿಯದವರೂ ತಿಳಿಯಲಿ ಬಿಡು. ಇದರ ವಿಷಯವಾಗಿ ಇನ್ನೇನೂ ಮಾಡಬೇಡ, ಪತ್ರಿಕೆಯನ್ನು ಹರಿದು ಹಾಕು. ಅವರ ವಿಚಾರಗಳನ್ನು ಈಗ ಪ್ರಚಾರ ಮಾಡುತ್ತಿರುವುದು ನೀನು ತಾನೆ?'' ಭಕ್ತ ಪತ್ರಿಕೆಯನ್ನು ಎಸೆದುಬಿಟ್ಟ. ಸ್ವಲ್ಪ ತಡೆದು ಬಾಬಾ ಹೇಳಿದರು, ''ಆಳ್ವಾರಿನಲ್ಲಿ ರಾತ್ರಿಹೊತ್ತು ಒಂದು ಮನೆಯಲ್ಲಿ ತಂಗಿದ್ದೆ. ಊಟವಾದ ನಂತರ ಪ್ರತಿಯೊಂದು ವಿಷಯದಲ್ಲೂ ಅವರು ಸ್ವಾಮೀಜಿಯನ್ನು ನಿಂದಿಸುತ್ತಿದ್ದರು. ಒಂದು ಸಲ ಪ್ರತಿಭಟಿಸಿದೆ, ನಂತರ ಆ ಕ್ಷಣವೇ ಆ ಮನೆಯನ್ನು ತ್ಯಜಿಸಿದೆ. ಆಗ ರಾತ್ರಿ ೧೦-೧೧ ಗಂಟೆಯಿದ್ದಿರಬೇಕು.''

ಬ್ರಹ್ಮಚಾರಿಯೊಬ್ಬರಿಗೆ ಪೂರ್ವಬಂಗಾಳದ ಉಚ್ಚಾರಣೆಯೊಂದಿಗೆ ಬಾಬಾ ಹೇಳುತ್ತಿದ್ದಾರೆ: ''*ಗಹನಾ ಕರ್ಮಣೋ ಗತಿಃ* - ಕರ್ಮಯೋಗ ಬಹಳ ಕಠಿಣವಾದ ಪಥ. ಧ್ಯಾನ-ಜಪಗಳು ಅದಕ್ಕಿಂತ ಎಷ್ಟೋ ಸುಲಭ. ನೀನು ಏನು ಧ್ಯಾನ - ಜಪ ಮಾಡುತ್ತೀಯೆಂದು ನನಗೆ ಗೊತ್ತು. ಅದು ಕೇವಲ ಕೆಲಸ ತಪ್ಪಿಸಿಕೊಳ್ಳುವ ಮಾರ್ಗವಷ್ಟೆ. ಕೆಲಸ ಮಾಡು, ಕೆಲಸ ಮಾಡು. Positive something - ಯಾವುದರ ಫಲ ಕೂಡಲೇ ಸಿಗುತ್ತದೋ ಅಂಥ ಕೆಲಸ ಮಾಡು. ಅದರಿಂದ ನಿನಗೂ ಹಿತ, ಇತರರಿಗೂ ಹಿತ. ಇದೇ ನಿಜವಾದ ಬುದ್ಧಿವಂತಿಕೆ. work, work (ಕೆಲಸ ಮಾಡು,

ಕೆಲಸ ಮಾಡು) ಆದರೆ as worship (ಉಪಾಸನಾಭಾವದಿಂದ) ಮಾಡು. 'ಯೋಗ' ವೆಂದರೆ ಇದೇ. ಯಾರು ಸರಿಯಾಗಿ ಧ್ಯಾನ–ಜಪ ಮಾಡುತ್ತಾರೊ, ಅವರ ಕರ್ಮದ ಶಕ್ತಿ ಹಾಗೂ ಕುಶಲತೆ ವರ್ಧಿಸುತ್ತದೆ. ಅವರೆಂದೂ tired (ಆಯಾಸ) ಆಗುವುದಿಲ್ಲ. ಏಕೆಂದರೆ ಅವರ ಶಕ್ತಿ ವ್ಯರ್ಥವಾಗುವುದಿಲ್ಲ. ಅಂಥವರು ಅನಾಸಕ್ತರಾಗಿ ಕೆಲಸ ಮಾಡುವುದರಿಂದ ಕೋಪಗೊಳ್ಳುವುದೂ ಇಲ್ಲ. ಸದಾ ಶಾಂತವಾಗಿ, ಅನಾಯಾಸವಾಗಿ ಕೆಲಸ ಮಾಡುತ್ತಾರೆ. ಮನಸ್ಸು ಸರಿಯಾಗಿ ಕೆಲಸ ಮಾಡುತ್ತಿದೆಯೇ ಇಲ್ಲವೇ ಎಂಬುದಕ್ಕೆ ಇದೇ test (ಪರೀಕ್ಷೆ); ಇದರಿಂದಲೇ ಅದು ಸ್ಪಷ್ಟವಾಗಿ ತಿಳಿದುಬಿಡುತ್ತದೆ.''

* * * *

ಒಂದು ದಿನ ಬಾಬಾ ಸಂಭಾಷಣೆಯ ನಡುವೆ ತಮ್ಮ ಸಾಧನೆ, ಭಜನೆ ಹಾಗೂ ಜೀವನವನ್ನು ಕುರಿತು ಅನೇಕ ವಿಚಾರಗಳನ್ನು ಹೇಳಿದರು: ''ಬಾಲ್ಯದಲ್ಲಿ ನಾನು ಶಿವಪೂಜೆ ಮಾಡುತ್ತಿದ್ದೆ, ಪ್ರತಿದಿನ ಮಣ್ಣಿನಿಂದ ಶಿವನನ್ನು ಮಾಡಿ ಹೂ, ಬಿಲ್ವಪತ್ರೆ, ಗಂಗಾಜಲಗಳಿಂದ ಅಲಂಕರಿಸಿ ಪೂಜಿಸುತ್ತಿದ್ದೆ; ಸ್ತವ, ಪಠನ ಮಾಡುತ್ತಿದ್ದೆ. ಗಂಗಾಸ್ನಾನ ಮಾಡುವಾಗ ಪ್ರಾಣಾಯಾಮದ ಕುಂಭಕವನ್ನು ಮಾಡುತ್ತಿದ್ದೆ, ನೀರಿನೊಳಗೆ ಒಂದು ಕಲ್ಲಿನ ಬಂಡೆಯನ್ನು ಹಿಡಿದು ಮುಳುಗುತ್ತಿದ್ದೆ... ನಂತರವೇ ಠಾಕೂರರನ್ನು ಭೇಟಿಯಾದೆ. 'ಅಷ್ಟೆಲ್ಲ ಮಾಡಬೇಕಾಗಿಲ್ಲ, ಅವೆಲ್ಲ ಈ ಕಾಲಕ್ಕೆ ಸರಿಹೊಂದುವುದಿಲ್ಲ. ಭಕ್ತಿ ವಿಶ್ವಾಸಗಳಿದ್ದರೆ ಸಾಕು' ಎಂದವರು ಹೇಳಿಬಿಟ್ಟರು. ಠಾಕೂರರ ದೇಹತ್ಯಾಗದ ಬಳಿಕ ವರಾಹನಗರ ಮಠದಲ್ಲಿ ಎಲ್ಲರಿಗೂ ತೀವ್ರ ವೈರಾಗ್ಯ, ಠಾಕೂರರ ದರ್ಶನಕ್ಕಾಗಿ ವ್ಯಾಕುಲತೆ ಉಂಟಾಗಿತ್ತು. ಸಂಜೆ ಗಂಗಾತೀರದಲ್ಲಿ, ನಂತರ ಸ್ಮಶಾನದಲ್ಲಿ ಇಡೀರಾತ್ರಿ ಜಪಧ್ಯಾನ ಮಾಡುತ್ತ ಕಳೆಯುತ್ತಿದ್ದೆವು. ಮುಂಜಾನೆ ಹಕ್ಕಿ ಕೂಗಿದಾಗ ಗಂಗೆಯಲ್ಲಿ ಮುಳುಗುಹಾಕಿ, ಮಠಕ್ಕೆ ಹಿಂದಿರುಗುತ್ತಿದ್ದೆವು. ಕೆಲವು ದಿನ ಮಠದಲ್ಲೇ ಎಲ್ಲವೂ ನಡೆಯುತ್ತಿತ್ತು. ಕುರ್ಚಿಯಲ್ಲಿ, ಚಾಪೆಯಲ್ಲಿ ಕುಳಿತು ಠಾಕೂರರನ್ನು ಕುರಿತು ಮಾತುಕತೆಯಾಡುತ್ತ ಧ್ಯಾನ ಮಾಡುತ್ತಿದ್ದೆವು. ಯಾರು ಯಾವ ಸ್ಥಿತಿಯಲ್ಲಿದ್ದೆವೋ, ಆ ಸ್ಥಿತಿಯಲ್ಲಿಯೇ ಎಲ್ಲರೂ ಧ್ಯಾನ ಮಗ್ನರಾಗುತ್ತಿದ್ದೆವು!

''ಹೃಷೀಕೇಶದಲ್ಲಿ ಛತ್ರದ ಗಂಟೆ ಬಾರಿಸುತ್ತಿತ್ತು. ಧ್ಯಾನಕ್ಕೆ ಕುಳಿತಲ್ಲಿಂದ ಏಳಲು ಮನಸ್ಸಾಗುತ್ತಿರಲಿಲ್ಲ. ಬಹಳ ಹೊತ್ತಿನ ಮೇಲೆ ಮನೆಮುಂದೆ ಹೋಗಿ ಭಿಕ್ಷೆ ನೀಡುವ ತಾಯಿಯ ಬಳಿ ಹೋಗಿ ಸುಮ್ಮನೆ ನಿಲ್ಲುತ್ತಿದ್ದೆ. ''ಮಗು, ಇಷ್ಟು ಹೊತ್ತೇಕೆ, ಗಂಟೆ ಕೇಳಿಸಲಿಲ್ಲವೆ?'' ''ಅಮ್ಮಾ, ಧ್ಯಾನ ಮಾಡುತ್ತಿದ್ದೆ. ಏಳಲಿಲ್ಲ.'' ''ಈಗ ಇಲ್ಲಿ ಏನೂ ಇಲ್ಲವಲ್ಲ, ಸ್ವಲ್ಪ ಇರು ಮಗು, ಅಡಿಗೆ ಮಾಡಿ ಕಳುಹಿಸುತ್ತೇನೆ.'' ಹೀಗೆಂದು ಆಹಾರ ತಂದುಕೊಟ್ಟು ಹೋಗುತ್ತಿದ್ದಳು. ಕೊನೆಗೆ ನನಗಾಗಿ ಎರಡು ರೊಟ್ಟಿಗಳನ್ನು ಕಾದಿರಿಸುತ್ತಿದ್ದಳು.

''ಚಿಕ್ಕಂದಿನಲ್ಲಿ ನಾನು ಮಣ್ಣಿನ ಶಿವಲಿಂಗವನ್ನು ಮಾಡಿ ಪೂಜಿಸಿದ್ದೇನೆ. ನಂತರ ಹಿಮಾಲಯದಲ್ಲಿ ಜೀವಂತ ಶಿವನ ದರ್ಶನವನ್ನು ಪಡೆದಿದ್ದೇನೆ. ಶ್ರೀರಾಮಕೃಷ್ಣರೇ ಎಲ್ಲರೊಳಗೂ ನಡೆದಾಡುತ್ತಿದ್ದಾರೆ – ಅವರೇ ಸಾಕ್ಷಾತ್ ನಾರಾಯಣ. ಅವರಲ್ಲಿಯೇ ಈ ಸೇವಾಧರ್ಮದ ಬೀಜವಿತ್ತು, ಈಗ ಅದು ನಾಲ್ಕೂ ದಿಕ್ಕುಗಳಲ್ಲಿ ಪಲ್ಲವಿತವಾಗಿದೆ. ದೇವಘರ್‌ನಲ್ಲಿ ಅವರು ಮಥುರಬಾಬುವಿಗೆ ಹೀಗೆಂದರು: 'ಇವರಿಗೆ ತಿನ್ನಲು ಕೊಡು, ಉಡಲು ಬಟ್ಟೆ ಕೊಡು, ತಲೆಗೆ ಹಚ್ಚಿ ಕೊಳ್ಳಲು ಎಣ್ಣೆ ಕೊಡು. ಇಲ್ಲದಿದ್ದರೆ ನಾನು ಕಾಶಿಗೆ ಹೋಗಲಾರೆ, ಇಲ್ಲಿಂದ ಏಳಲಾರೆ.' ಆದ್ದರಿಂದಲೇ ಈ ಸೇವಾಧರ್ಮದ ಯುಗಚಕ್ರ ತಿರುಗತೊಡಗಿತು. ನಾನು ಯಾವಾಗಲೂ ಹೇಳುತ್ತೇನೆ, ಕೆಲಸ ಮಾಡು, ಕೆಲಸ ಮಾಡು ಅಂತ. something positive, ಸದ್ಯದಲ್ಲೇ ಫಲಕೊಡುವಂಥ ಕೆಲಸಗಳನ್ನು ಮಾಡು. ಜಪಧ್ಯಾನವೇನು ಮಾಡುವೆ? ಎಷ್ಟು ಧ್ಯಾನ ಜಪಗಳನ್ನು ಮಾಡುವೆಯಂತೆ? ಅದು ನಮಗೆ ಗೊತ್ತು.

''ಸ್ವಾಮೀಜಿ ಹಾಗೂ ನಾನು – ಇಬ್ಬರೂ ಪರ್ವತಮಾರ್ಗದಲ್ಲಿ ಹೋಗುತ್ತಿದ್ದೆವು. ಒಂದೆಡೆ ನೋಡಿದೆವು, ಒಬ್ಬ ಸಾಧು ಧ್ಯಾನ ಮಾಡುತ್ತ ಕುಳಿತಿದ್ದ. ಗೊರಕೆ ಹೊಡೆಯುತ್ತಿದ್ದಾನೆ! ಸ್ವಾಮೀಜಿ ಗಟ್ಟಿಯಾಗಿ ಕೂಗಿದರು, 'ಅರೆ, ಕುಳಿತಲ್ಲೇ ಇಷ್ಟೊಂದು ನಿದ್ರಿಸುತ್ತಿದ್ದಾನೆ, ಈತನ ಬೆನ್ನಿಗೆ ನೊಗ ಕಟ್ಟಿ. ಅದರಿಂದ ಮುಂದೆ ಎಂದೋ ಅವನು ಏನನ್ನಾದರೂ ಸಾಧಿಸಬಹುದೇನೊ!'

''ಇನ್ನೊಂದು ಸಲ ರಜಪುತಾನದಲ್ಲಿ ಒಬ್ಬ ಸೋಮಾರಿ, idiot (ಬುದ್ಧಿಮಾಂದ್ಯ) ಹುಡುಗನನ್ನು ಮನೆಯವರು ಸ್ವಾಮೀಜಿ ಹತ್ತಿರ ಕರೆದುಕೊಂಡು ಬಂದರು. ಇವನು ಬಹಳ ಆಧ್ಯಾತ್ಮಿಕ ಸಂಪನ್ನನೆಂದೂ, ಆದ್ದರಿಂದಲೇ ಅವನು ಹೀಗೆಂದೂ ಅವರು ಭಾವಿಸಿದ್ದರು. ಏನೇ ಇರಲಿ, ಸ್ವಾಮೀಜಿ ಒಬ್ಬರು ಜ್ಞಾನಿಗಳು. ಹುಡುಗ ಎಷ್ಟರ ಮಟ್ಟಿಗೆ ಉನ್ನತಿಯನ್ನು ಹೊಂದಿದ್ದಾನೆ ಇತ್ಯಾದಿ ಅವನ ವೃತ್ತಾಂತವನ್ನೆಲ್ಲಾ ಕೇಳಿ ನೇರವಾಗಿ ಹೇಳಿದರು: 'ಅವನನ್ನು ಸಾರಾಯಿ ಅಂಗಡಿಗೋ ಅಥವಾ ಅದರ ಸಮೀಪವಿರುವ ಸ್ಥಳಗಳಿಗೋ ಕರೆದುಕೊಂಡು ಹೋಗಿ, ಆಗಲಾದರೂ ಅವನ ಚೈತನ್ಯ ಜಾಗೃತವಾಗಬಹುದೇನೋ! ಅಲ್ಲಿ ಯಾವುದಾದರೊಂದು action (ಕ್ರಿಯೆ) ನಡೆದಾಗ, ಅದರ reaction (ಪ್ರತಿಕ್ರಿಯೆ) ಉಂಟಾಗಿ ಅವನು ಜಾಗೃತನಾಗಬಹುದು.' ಸ್ವಾಮೀಜಿ ಮಾಡಿದ ವ್ಯವಸ್ಥೆ ಹೀಗಿತ್ತು.

''ಇವನ್ನೆಲ್ಲ ನೋಡಿ, ಕೇಳಿ ಅವರೆನ್ನುತ್ತಿದ್ದರು, 'ಸತ್ವದ ಸೋಗು ಹಾಕಿಕೊಂಡು ನಮ್ಮ ದೇಶ ತಮಸ್ಸಿನ ಸಮುದ್ರದಲ್ಲಿ ಮುಳುಗುತ್ತಿದೆ. ಇದರಿಂದ ದೇಶವನ್ನು ಕಾಪಾಡಬೇಕಾದರೆ **ಆಪಾದಮಸ್ತಕ ಶಿರಾಯ ಶಿರಾಯ ವಿದ್ಯುತ್ ಸಂಚಾರೀ ತೀವ್ರ ರಜೋಗುಣ**ವಿರಬೇಕು' ಎಂದು. ಆದ್ದರಿಂದಲೇ ಕರ್ಮಕ್ಕೆ ಅಷ್ಟೊಂದು ಪ್ರಾಧಾನ್ಯತೆ ನೀಡಿರುವುದು. ಆಗುವುದಾಗಲಿ, ಕರ್ಮವನ್ನು ಮಾಡುತ್ತ ಹೋಗು, ಆಗಲೇ ಸ್ವಲ್ಪವಾದರೂ ಏನೋ ಸಿಗುವುದು – ಖಂಡಿತ ಸಿಗುವುದು. ನಿಮ್ಮಲ್ಲಿ ಧೈರ್ಯವಿಲ್ಲ, ಸಾಮರ್ಥ್ಯವಿಲ್ಲ, ವಿಶ್ವಾಸವಿಲ್ಲ. ಯಾವಾ

ಗಲೂ ಭಯ – 'ಆಗದಿದ್ದರೆ' ಎಂದು. ಆದ್ದರಿಂದಲೇ ನಾವು ಹೀಗೆ ಹಿಂದುಳಿದಿರುವುದು. ವಿಫಲನಾದರೆ ಏನಂತೆ? ಜನ ಕೆಟ್ಟವನೆಂದು ಜರೆದರೇನಂತೆ? ನೀನು ಭಗವಂತನ ಹೆಸರು ಹೇಳುತ್ತ ಧೈರ್ಯ, ವಿಶ್ವಾಸ, ನಿರ್ಭರತೆಗಳೊಂದಿಗೆ ಕೆಲಸ ಮಾಡುತ್ತ ಹೋಗು.

''ಹಿಮಾಲಯದ ಉತ್ತುಂಗ ಶಿಖರಗಳಲ್ಲಿ ನಾನು ಉತ್ಸಾಹ ದಿಂದ ನಡೆದಾಡಿದ್ದೇನೆ. ಒಂದು ಶಿಖರವನ್ನು ದಾಟಿ ಬಂದು ನೋಡಿ ದರೆ, ಇನ್ನೊಂದು ಶಿಖರ ಕಣ್ಣನೋಟವನ್ನು ತಡೆದು ನಿಲ್ಲುತ್ತಿತ್ತು. ಸ್ವಲ್ಪ ವಿಶ್ರಮಿಸುತ್ತಿರುವಾಗ, ಅದನ್ನು ಯಾವಾಗ ದಾಟುತ್ತೇನೋ ಅನ್ನಿಸುತ್ತಿತ್ತು. ಮತ್ತೆ ಪ್ರಯತ್ನ, ಮತ್ತೆ ಮುಂದಕ್ಕೆ ನಡೆಯುತ್ತಿದ್ದೆ. ನಿಜವಾಗಿಯೂ ಹೇಳುತ್ತೇನೆ, ನಿಮ್ಮಲ್ಲಿ ಹೆಚ್ಚಿನವರು ಕರ್ಮಕ್ಕೆ ಅಧಿ ಕಾರಿಗಳು – ಕರ್ಮ ಮಾಡಿ. ದಣಿಯುವವರೆಗೂ ಕರ್ಮ ಮಾಡಿ. ಆದರೆ ಒಂದು ಮಾತು, ನಾನು ಭಗವಂತನ ಕೆಲಸ ಮಾಡುತ್ತಿದ್ದೇನೆ, ಠಾಕೂರರ ಕೆಲಸ ಮಾಡುತ್ತಿದ್ದೇನೆ – ಎಂಬ ಭಾವ ಯಾವಾಗಲೂ ಇರಬೇಕು. ಇಲ್ಲದಿದ್ದರೆ ಕಷ್ಟ.

'' 'ಉದ್ಬೋಧನ'ದ ಸತ್ಯೇನ್ (ಸಾಮಿ ಆತ್ಮಬೋಧಾನಂದ) ಆಗ ಕಾಲೇಜ್ ಸ್ಟ್ರೀಟ್‌ನಲ್ಲಿ ಅದ್ವೈತಾಶ್ರಮದ ಪುಸ್ತಕಗಳನ್ನು ಮಾರು ತ್ತಿದ್ದ. ಹತ್ತು ಗಂಟೆಯ ಹೊತ್ತಿಗೆ ಸ್ವಲ್ಪ ಅನ್ನ ಊಟ ಮಾಡಿ ಹೋಗು ತ್ತಿದ್ದ. ದಿನವಿಡೀ ಅಂಗಡಿಯಲ್ಲಿರುತ್ತಿದ್ದ. ಅಲ್ಲಿ ಬಹಳ ಬೇಸರ ಪಡುತ್ತಿದ್ದ, 'ಇದೇನು ಮಾಡುತ್ತಿದ್ದೇನೆ' ಎಂದು. ಒಂದು ದಿನ ಅಂಗಡಿಯ ಮುಂದೆ ನಿಂತು ಎಂತಹ ಲೆಕ್ಚರ್ ಕೊಟ್ಟೆನೆಂದರೆ, ಅವನು ಇಂದಿಗೂ ಹೇಳುತ್ತಾನೆ, 'ಮಹಾರಾಜ್, ಅದೆಂತಹ inspiration (ಪ್ರೇರಣೆ) ಪಡೆದೆನೆಂದರೆ, ಅದರ ರಭಸ ದಿಂದಲೇ ಇಂದೂ ಮುನ್ನಡೆಯುತ್ತಿದ್ದೇನೆ.' ನಾನು ಅವನಿಗೆ ಹೇಳಿದೆ, 'ನೀನೇನು ಸಾಧಾರಣ ಕೆಲಸವನ್ನು ಮಾಡುತ್ತಿದ್ದೀ ಅಂದು ಕೊಂಡಿದ್ದೀಯಾ? ಇದರಲ್ಲಿ ಅದೆಷ್ಟು ತ್ಯಾಗ, ತಪಸ್ಸು, ಸೇವೆಗಳು ಅಡಗಿವೆ! ನಿಜವಾದ ಸಾಧನೆಯೆಂದರೆ ಇದೇ. ಬೆಳಗ್ಗೆ ಒಂದೆರಡು ತುತ್ತು ಅನ್ನ ಉಂಡು ಬರುತ್ತೀ, ಉಳಿದವರೆಲ್ಲ ಅದೇನೇನೋ ತಿನ್ನು ತ್ತಾರೆ. ಇದೇ ತ್ಯಾಗ. ಆಮೇಲೆ ಈ ಚಿಕ್ಕದೊಂದು ಕೋಣೆ – ಇಡೀ ದಿನ ಈ ಸ್ಥಳದಲ್ಲಿಯೇ ಅಲುಗಾಡದೆ ಕುಳಿತಿರುತ್ತೀಯಾ – ಇದೇ ತಪಸ್ಸು. ಈ ಎಲ್ಲಾ ಪುಸ್ತಕಗಳಿಂದ ಅದೆಷ್ಟು ಜನರಲ್ಲಿ ಠಾಕೂರರ, ಸ್ವಾಮೀಜಿಯವರ ವಿಚಾರಗಳು ಪ್ರಚಾರವಾಗುತ್ತಿದೆ – ಇವೆಲ್ಲಾ ನಿನ್ನಿಂದಲೇ ಆಗುತ್ತಿವೆ. ಠಾಕೂರರಿಗೆ ಈ ಸೇವೆಯೇನು ಕಡಿಮೆಯೆ? ದೇವರ ಮನೆಯ ಕೆಲಸ ಮಾತ್ರ ಠಾಕೂರರ ಕೆಲಸವೇನು?

''ನಿಮಗೂ ನಾನು ಹೇಳುತ್ತಿದ್ದೇನೆ. 'ಏನನ್ನು ಮಾಡುತ್ತೇನೋ ಅದೆಲ್ಲವೂ ಸಾಧನೆ' ಎಂಬ ಭಾವನೆಯನ್ನು ಇಟ್ಟುಕೊಂಡು ಬನ್ನಿ. ಯಾವುದು ಸಾಧನೆ ಎಂದು ಅನ್ನಿಸುವುದಿಲ್ಲವೋ, ಅದನ್ನು ಮಾಡ ಬೇಡಿ. ತಿನ್ನುವಾಗ ಆತನಿಗೆ ಆಹುತಿ ಕೊಡುತ್ತಿದ್ದೇನೆ ಎಂದು ಭಾವಿಸಿ. ತಿರುಗಾಡುವಾಗ, ಅಥವಾ ನಗರ ಸಂಚಾರ ಮಾಡುವಾಗ ಆತನ ಪ್ರದಕ್ಷಿಣೆ ಮಾಡುತ್ತಿದ್ದೇನೆ ಎಂದು ಭಾವಿಸಿ. ಮಲಗಿ ನಿದ್ರಿಸು ವಾಗ ಭಗವಂತನನ್ನು ಧ್ಯಾನಿಸುತ್ತಿದ್ದೇನೆ ಎಂದು ಚಿಂತಿಸಿ. ಹೀಗೆ ಸದಾ ಭಗವದ್‌ಭಾವದಿಂದ ತುಂಬಿಕೊಂಡಿರಬೇಕು. ಒಂದು ಹಾಡಿ ನಲ್ಲಿ ಈ ಭಾವ ಹೀಗೆ ಬಂದಿದೆ: **'ಶಯನೇ ಪ್ರಣಾಮ ಜ್ಞಾನ್ ನಿದ್ರಾಯ್ ಕೊರೊ ಮಾ ಕೇ ಧ್ಯಾನ್; ಆಹಾರ್ ಕೊರೊ ಮನೇ ಕೊರೊ ಆಹುತಿ ದಿಯಿ ಶ್ಯಾಮಾ ಮಾರೇ।'** ''*(ಅನುವಾದ ಮೇಲಿದೆ.)*

ಸಂಜೆ ಜಗಲಿಯ ಕ್ಯಾಂಪ್‌ಕಾಟ್‌ನ ಮೇಲೆ ಸ್ವಾಮಿ ಅಖಂಡಾ ನಂದರು ಕುಳಿತಿದ್ದಾರೆ. ಒಬ್ಬಿಬ್ಬರು ಉಪಸ್ಥಿತರಿದ್ದಾರೆ. ಬಾಬಾ ಹೇಳಿದರು : ''ಹೆಚ್ಚು ನಿದ್ರಿಸಬೇಡಿ. ಯೋಗಿಗೆ ೪ ಗಂಟೆಗಳ ನಿದ್ರೆ, ಭೋಗಿಗೆ ೬ ಗಂಟೆಗಳ ನಿದ್ರೆ. ಆ ದಿನ 'ಉದ್ಬೋಧನ'ದಲ್ಲಿ ಮಹಾರಾಜರ (ಸ್ವಾಮಿ ಬ್ರಹ್ಮಾನಂದರ) ಮಾತುಗಳನ್ನೋದಿ ಭಾರೀ ಆನಂದವಾಯಿತು. ಅವರೆನ್ನುತ್ತಾರೆ, ೪ ಗಂಟೆಗಿಂತ ಅಧಿಕ ನಿದ್ರೆ ಮಾಡುವ ರೋಗಕ್ಕೆ ಚಿಕಿತ್ಸೆ ಬೇಕು. ನಿದ್ರಿಸದಿದ್ದರೆ ಶರೀರ ದುರ್ಬಲ ಗೊಳ್ಳುತ್ತದೆ ಎಂದು ನೀವೆನ್ನುತ್ತೀರಿ. ಆದರೆ ಸತ್ಯ ಅದಕ್ಕೆ ವಿರುದ್ಧ. ನಿದ್ರಿಸಿದರೆ ದುರ್ಬಲರಾಗುತ್ತಾರೆ, ಅದರಲ್ಲೂ ಹಗಲು ನಿದ್ರಿಸಿದರೆ. ಮಧ್ಯಾಹ್ನ ಸ್ವಲ್ಪ ವಿಶ್ರಾಂತಿ ಬೇಕು, ಜತೆಗೆ ತುಸು ಓದಬೇಕು. ಶ್ರೀರಾಮಕೃಷ್ಣರ ಬಳಿ ಹೇಳಿಕೊ, 'ನನ್ನೆಲ್ಲ ಭೋಗೇಚ್ಛೆಯನ್ನು ದೂರೀಕರಿಸು' ಅಂತ. ನಿದ್ರೆಯೂ ಒಂದು ರೀತಿಯಲ್ಲಿ ಭೋಗ. ನಿಜವಾಗಿಯೂ ಭಗವಂತ ಬೇಕಾಗಿದ್ದರೆ ಈ ಭೋಗವನ್ನೂ ಬಿಡ ಬೇಕು. ಯಾರು ನಿಜವಾಗಿ ಭಗವಂತನನ್ನು ಪಡೆಯಬಯಸು ವರೋ ಅವರು ಹೇಗಾದರೂ ನಿದ್ರಿಸುವರು? 'ಇನ್ನೂ ಭಗವಂತನ ದರ್ಶನವಾಗಲಿಲ್ಲ, ಇಂದೂ ಆತನ ದರ್ಶನವಾಗಲಿಲ್ಲ, ಇನ್ನೂ ಆತನಿಗಾಗಿ ಅಳಲಾಗುತ್ತಿಲ್ಲವಲ್ಲ' ಎಂಬ ಚಿಂತೆ ಪ್ರತಿಕ್ಷಣವೂ ಅವರ ಅಂತರಂಗದಲ್ಲಿ ಧಗಧಗನೆ ಉರಿಯುತ್ತಿರುತ್ತದೆ.

''ಠಾಕೂರರು ನಮಗೆ ಪ್ರಾರ್ಥನೆ ಮಾಡಲು ಕಲಿಸುತ್ತಿದ್ದರು – ಅವರ ಮಂಚದ ಮೇಲೆ ಚಿಕ್ಕ ಹುಡುಗನಂತೆ ಕಾಲುಚಾಚಿ, 'ಓ ತಾಯಿ, ದರ್ಶನ ನೀಡು. ತಾಯಿ, ಚಿಕ್ಕ ಬಾಲಕನನ್ನು ಬಿಟ್ಟು ಹೇಗಾ ದರೂ ಮರೆತಿರುವೆ ತಾಯಿ? ನಿನ್ನನ್ನು ನೋಡದೆ ನನಗೆ ಇರಲಾಗು ತ್ತಿಲ್ಲ. ಅಮ್ಮಾ, ಬಾರಮ್ಮ, ನಿನ್ನ ಮಡಿಲಿಗೆ ನನ್ನನ್ನು ಎತ್ತಿಕೊಳ್ಳಮ್ಮಾ' ಎಂದು ವ್ಯಾಕುಲತೆಯಿಂದ ಅಳುತ್ತಿದ್ದರು. ನಿಜವಾಗಿಯೂ ಅವರು ಅಳುತ್ತಿದ್ದರು. ನಮಗೆ ಆ ಭಾವವನ್ನು ತೋರಿಸಿಕೊಡುತ್ತ, ಆ ಭಾವ ದಲ್ಲೇ ತನ್ಮಯರಾಗಿಬಿಡುತ್ತಿದ್ದರು – ಕೈಕಾಲುಗಳನ್ನು ಚಾಚಿ ಚಿಕ್ಕ ಹುಡುಗನಂತೆ ತಾಯಿಯನ್ನು ನೋಡಬೇಕೆಂದು ಅಳುತ್ತಿದ್ದರು. ಅನಂತರ ಸ್ಥಿರವಾಗಿ, ಕಣ್ಣೀರು ತುಂಬಿ ಕಂಪಿಸುವ ಸ್ವರದಿಂದ ಹೇಳು ತ್ತಿದ್ದರು – 'ಅಮ್ಮಾ, ನಾನು ಸಾಧನಹೀನ, ಭಜನಹೀನ. ತಾಯಿ, ನನಗೆ ಜ್ಞಾನ ನೀಡು, ಭಕ್ತಿ ನೀಡು. ತಾಯಿ, ನಿನ್ನ ಪಾದಗಳಲ್ಲೇ ನನಗೆ ಅಚಲವಾದ ಮತಿಯನ್ನು ಕರುಣಿಸು.' '' ✷

*(ಮುಂದುವರಿಯುವುದು)*

ಭಾಗ ೫

# ಸ್ವಾಮಿ ಪ್ರೇಮಾನಂದರು

ಸ್ವಾಮಿ ಅಶೋಕಾನಂದ

ಅನುವಾದ: ಡಾ. ಇ. ವಸಂತಕುಮಾರ್

**ಸ್ವಾ**ಮಿ ಪ್ರೇಮಾನಂದರು, ಹಸುಗಳಿಗೆ ಮೇವನ್ನು ಸಿದ್ಧಪಡಿಸುವ ಸಂನ್ಯಾಸಿಗಳೊಂದಿಗೂ ಕೈಜೋಡಿಸುತ್ತಿದ್ದರು. ಆ ಕೆಲಸ ಮುಖ್ಯವಾಗಿ ಒಣಹುಲ್ಲನ್ನು ಸಣ್ಣದಾಗಿ ಕತ್ತರಿಸುವುದಾಗಿತ್ತು. ಅದಕ್ಕೂ ಕೂಡ ಜಾಗರೂಕತೆ ಬೇಕಾಗಿತ್ತು. ಯಾವ ಕೆಲಸವನ್ನೂ ಅವರು ತಮ್ಮ ಯೋಗ್ಯತೆಗೆ ಕಡಿಮೆ ಎಂದು ಭಾವಿಸುತ್ತಿರಲಿಲ್ಲ. ಅವರು ಮಠದ ಮುಖ್ಯಸ್ಥರಾಗಿದ್ದರೂ, ಅತ್ಯಂತ ಕಿರಿಯ ಬ್ರಹ್ಮಚಾರಿಯ ಜತೆಗೂಡಿ ಕೆಲಸ ಮಾಡುತ್ತಿದ್ದರು. ಬೆರಣಿ ತಟ್ಟುವುದು, ಸಗಣಿಯೊಂದಿಗೆ ಕಲ್ಲಿದ್ದಲು ಪುಡಿಯನ್ನು ಬೆರೆಸುವುದು, ಕಳೆ ಕೀಳುವುದು, ಎಲ್ಲ ಕೆಲಸಗಳಲ್ಲಿಯೂ ಭಾಗವಹಿಸುತ್ತಿದ್ದರು, ಕೇವಲ ಆಜ್ಞೆ ಮಾಡುತ್ತಿರಲಿಲ್ಲ. ''ಇಲ್ಲಿ ಮಾಡುವ ಪ್ರತಿಯೊಂದು ಕೆಲಸವೂ ಪವಿತ್ರವಾದುದು. ನೀವು ತರಕಾರಿ ಕತ್ತರಿಸಿ, ಅಥವಾ ಬೆರಣಿ ತಟ್ಟಿ, ಹೊರಗಡೆ ಹೋಗಿ ಪ್ರವಚನ ಮಾಡಿ, ಇಲ್ಲವೆ ದೇವಸ್ಥಾನದಲ್ಲಿ ಪೂಜೆ ಮಾಡಿ – ಎಲ್ಲವೂ ಭಗವಂತನಿಗೆ ಮಾಡುವ ಸೇವೆ. ಎಲ್ಲ ಕೆಲಸಗಳನ್ನೂ ಒಂದೇ ಸಮನಾದ ಗೌರವ ಮತ್ತು ಪಾವಿತ್ರ್ಯದ ಭಾವದಿಂದ ಮಾಡುವುದನ್ನು ನೀವು ಕಲಿಯಬೇಕು'' ಎಂದು ಅವರು ಹೇಳುತ್ತಿದ್ದರು.

ಪ್ರತಿಯೊಂದೂ ಅತ್ಯಂತ ಸಮರ್ಪಕವಾಗಿರಬೇಕಾಗಿತ್ತು. ಯಾರನ್ನೂ ಯಾವ ವಿಷಯದಲ್ಲಿಯೂ ಉಪೇಕ್ಷೆಯಿಂದ ಇರಲು ಅವಕಾಶ ಕೊಡುತ್ತಿರಲಿಲ್ಲ. ಸಾಧುಗಳು ಸಂಪೂರ್ಣವಾಗಿ ಅಹಂಕಾರರಹಿತರಾಗಿ ಇರಬೇಕು, ಯಾವ ಬಗೆಯ ಉದಾಸೀನವೂ ಅವರಲ್ಲಿ ಇರಬಾರದು, ಯಾವ ರೀತಿಯ ಪ್ರಾಪಂಚಿಕ ಆಸೆಗಳೂ ಅವರಲ್ಲಿ ಇರಬಾರದು ಎಂಬುದನ್ನು ಸಂನ್ಯಾಸಿಗಳಿಗೆ ಮನಮುಟ್ಟುವಂತೆ ಸತತವಾಗಿ ಅವರು ತಿಳಿಸುತ್ತಿದ್ದರು. ಪ್ರತಿಯೊಂದು ಕೆಲಸವನ್ನೂ ಮೊದಲಿನಿಂದ ಕೊನೆಯವರೆಗೆ ಅತ್ಯಂತ ಸಮರ್ಪಕವಾಗಿ ಮಾಡಬೇಕಾಗಿತ್ತು. ಅದಕ್ಕೆ ಕಾರಣವನ್ನು ಅವರು ಒಮ್ಮೆ ವಿವರಿಸಿದರು: ''ಪ್ರಿಯ ಹುಡುಗರೇ, ಒಂದು ದಿನ ನೀವು ಅತ್ಯಂತ ಜವಾಬ್ದಾರಿಯ ಕೆಲಸಗಳನ್ನು ಮಾಡಬೇಕಾಗುವುದು. ಸಣ್ಣ ಕೆಲಸಗಳಲ್ಲಿ ನೀವು ಜವಾಬ್ದಾರಿಯನ್ನು ಅಭ್ಯಾಸಮಾಡದೆ ಹೋದರೆ, ದೊಡ್ಡ ಕೆಲಸಗಳಲ್ಲಿ ಅದನ್ನು ಕಲಿಯಲಾರಿರಿ. ನೀವು ಮೋಸ ಮಾಡುವಿರಿ.''

ಸಂನ್ಯಾಸಿಗಳನ್ನು ಅವರು ಜೋರಾಗಿಯೇ ಬೈಯುತ್ತಿದ್ದರು. ಆದರೆ, ನಂತರ ಅವರ ಕ್ಷಮೆ ಕೇಳುತ್ತಿದ್ದರು. ''ನಾಗರಹಾವಿನ ಮರಿಯೂ ನಾಗರಹಾವೇ. ನೀವು ಎಳೆ ನಾಗರ ಹಾವುಗಳು. ದಯವಿಟ್ಟು ಕ್ಷಮಿಸಿ'' ಎಂದು ಅವರು ಹೇಳುತ್ತಿದ್ದರು. ನಾಗರ ಹಾವು? ಹಾಗೆಂದರೆ, ಭಗವಂತನ ಭಕ್ತರು. ಆಧ್ಯಾತ್ಮಿಕ ಪಿಪಾಸುಗಳನ್ನು, ಭಗವದ್ಭಕ್ತರನ್ನು ಹಿಂದುಮುಂದು ಮನನೋಯಿಸಬಾರದು. ಹಾಗೆ ಮಾಡಿದರೆ, ಮುಂದೆ ಅದರಿಂದ ಕಷ್ಟ ಪಡಬೇಕಾಗುವುದು. ಭಾರತದಲ್ಲಿ ಈ ನಂಬಿಕೆ ಎಷ್ಟು ಬಲವಾಗಿದೆಯೆಂದರೆ, ನಾವು ಇತರರನ್ನು ಟೀಕಿಸಬಾರದು, ಯಾರ ಬಗ್ಗೆಯೂ ಕೆಟ್ಟ ಮಾತನಾಡಬಾರದು, ಕೆಟ್ಟ ಆಲೋಚನೆಯನ್ನೇ ಮಾಡಬಾರದು ಎಂಬ ತರಪೇತನ್ನು ನಮಗೆ ಕೊಡಲಾಗಿದೆ. ಮಾತುಗಳು ಹೊರನೋಟಕ್ಕೆ. ನೋವುಂಟು ಮಾಡುವುದು ಆಲೋಚನೆ. ನೀವು ಹೇಳಬಹುದು, ನಾನು ಏನನ್ನೂ ಹೇಳದಿದ್ದರೆ, ಯಾರ ಮನಸ್ಸಿಗಾದರೂ ಹೇಗೆ ನೋವಾದೀತು? ನಿಮಗೆ ಆಶ್ಚರ್ಯವಾಗಬಹುದು. ಮಾತುಗಳು ಕೇವಲ ಮೇಲುನೋಟಕ್ಕೆ. ಆದರೆ ಆಲೋಚನೆಗಳು ವಿಶೇಷವಾಗಿ ಆಧ್ಯಾತ್ಮಿಕ ಸಾಧಕರಲ್ಲಿ , ಮಾತುಗಳಿಗಿಂತ ಹೆಚ್ಚು ಶಕ್ತಿಯುತ. ಸ್ವಾಮಿ ಪ್ರೇಮಾನಂದರು ಈ ವಿಷಯಗಳ ಬಗ್ಗೆ ಎಚ್ಚರಿಸುತ್ತಿದ್ದರು, ಅವನ್ನು ತಾವೇ ಅನುಸರಿಸುತ್ತಿದ್ದರು. ಹಾಗಿದ್ದರೂ, ಆವಶ್ಯಕತೆ ಬಂದಾಗ ಸಂನ್ಯಾಸಿಗಳಿಗೆ ಕಠಿಣವಾದ ಮಾತುಗಳನ್ನಾಡಿ ದಾರಿಗೆ ತರುತ್ತಿದ್ದರು; ಅವರು ಅಧ್ಯಯನ ಮಾಡುವಂತೆ, ಸೇವೆ ಮಾಡುವಂತೆ ಮಾಡುತ್ತಿದ್ದರು, ಅವರಿಗೆ ಎಲ್ಲ ಶಿಕ್ಷಣವನ್ನೂ ಕೊಡುತ್ತಿದ್ದರು. ಅವರ ಮೇಲ್ವಿಚಾರಣೆ ಮತ್ತು ರಕ್ಷಣೆ ಕೊನೆಯಿಲ್ಲದ್ದಾಗಿತ್ತು.

ಈ ಸಂದರ್ಭದಲ್ಲಿ ಕೆಲವು ಪುಸ್ತಕಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ಓದಿದ ಕಥೆಯೊಂದನ್ನು ನಿಮಗೆ ನಾನು ಹೇಳಲೇಬೇಕು. ಅದು ಹೀಗಿದೆ: ಸ್ವಾಮಿ ಪ್ರೇಮಾನಂದರು ಸ್ವಾಮಿ ಬ್ರಹ್ಮಾನಂದರ ಬಳಿ ಹೋಗಿ ಮಠದ ಇಬ್ಬರು ಸಂನ್ಯಾಸಿಗಳನ್ನು ಹೊರಹಾಕಬೇಕೆಂದು ಹೇಳಿದರಂತೆ. ಅವರು ಯೋಗ್ಯರಾಗಿರಲಿಲ್ಲ ಮತ್ತು ಅವರನ್ನು ಹೊರಗೆ ಕಳುಹಿಸಬೇಕಾಗಿತ್ತು. ಆದರೆ ಕಥೆಯ ಪ್ರಕಾರ, ಸ್ವಾಮಿ ಬ್ರಹ್ಮಾನಂದರು ಹೀಗೆ ಉತ್ತರವಿತ್ತರಂತೆ, ''ನಾವು ಅವರನ್ನು ಸಹಿಸಿಕೊಳ್ಳದಿದ್ದರೆ, ಅವರು ಮತ್ತೆಲ್ಲಿಗೆ ಹೋದಾರು? ಅವರು ಪರಿಪೂರ್ಣರಲ್ಲ; ನಮ್ಮಿಂದ ಪ್ರಯೋಜನ ಪಡೆಯುವುದಕ್ಕಾಗಿ ಅವರು ಇಲ್ಲಿಗೆ ಬಂದಿದ್ದಾರೆ.'' ಸ್ವಾಮಿ ಬ್ರಹ್ಮಾನಂದರು ಈ ಸಂನ್ಯಾಸಿಗಳ ಬಗ್ಗೆ ಉದಾರ ಭಾವನೆ ತೋರಿಸಿದರು, ಸ್ವಾಮಿ ಪ್ರೇಮಾನಂದರು ಅವರನ್ನು ಉಚ್ಚಾಟಿಸಲು ಬಯಸಿದ್ದರು. ಈಗ ಅದೊಂದು ದುರದೃಷ್ಟದ ಕಥೆ. ಏಕೆಂದರೆ ಅನೇಕ ವೇಳೆ ಅದರ ಹಿನ್ನೆಲೆಯ ಪೂರ್ಣ ವಿವರಗಳನ್ನು ತಿಳಿಸದೆ ಅದನ್ನು ಹೇಳಲಾಗುತ್ತಿದೆ, ಆದ್ದರಿಂದ ಅದು ತಪ್ಪು ಅಭಿಪ್ರಾಯವನ್ನು ಮೂಡಿಸುವುದು. ಸತ್ಯಾಂಶ ಸರಳವಾಗಿದೆ. ಸ್ವಾಮಿ ಪ್ರೇಮಾನಂದರಿಗೆ ಎಲ್ಲಾ ಸಂನ್ಯಾಸಿಗಳೊಂದಿಗೆ ಪ್ರೀತಿಯ ಬಂಧನವಿತ್ತು. ಒಂದು ಮಧ್ಯಾಹ್ನ ನಾನು ಬೇಲೂರು ಮಠಕ್ಕೆ ಹೋಗಿದ್ದಾಗ ಅವರು ಒಬ್ಬ ಯುವ ಬ್ರಹ್ಮಚಾರಿಯೊಂದಿಗೆ ಗಂಗಾ

ನದಿಯ ದಡದಲ್ಲಿ ನಿಂತಿದ್ದರು. ಆತನನ್ನು ಅವರು ತೀಕ್ಷ್ಣವಾಗಿ ಬಯ್ಯುತ್ತಿದ್ದರು. ''ಈ ದಿನ ಇವರಿಗೆ ಏನಾಗಿದೆ?'' ಎಂದು ಮತ್ತೊಬ್ಬ ಸಂನ್ಯಾಸಿಗಳನ್ನು ಕೇಳಿದೆ. ಅದಕ್ಕೆ ಅವರು, ''ಓ, ಅದು ಏನೂ ಅಲ್ಲ. ಈ ಹುಡುಗನನ್ನು ಮತ್ತೊಂದು ಮಠಕ್ಕೆ ವರ್ಗಾಯಿಸುತ್ತಿದ್ದಾರೆ. ಆದ್ದರಿಂದ ಅವನು ಹೊರಟಿದ್ದಾನೆ. ಯಾರಾದರೂ ಬೇಲೂರು ಮಠ ಬಿಟ್ಟುಹೋಗುವುದನ್ನು ಸ್ವಾಮಿ ಪ್ರೇಮಾನಂದರು ಸಹಿಸಲಾರರು. ಹೀಗೆ ಬಯ್ಯುವುದರ ಮೂಲಕ ಅವರ ಮನಸ್ಸಿನ ಭಾವನೆಯನ್ನು ವ್ಯಕ್ತಪಡಿಸುತ್ತಿದ್ದಾರೆ'' ಎಂದರು. ಅವರು ಪ್ರೀತಿ ಮತ್ತು ಕರುಣೆಯ ಮೂರ್ತರೂಪರು; ಆದರೆ ಬಹಳ ಆಲೋಚನಾಪರರು ಮತ್ತು ಆತ್ಮಸಾಕ್ಷಿಗೆ ಅನುಗುಣವಾಗಿ ನಡೆದುಕೊಳ್ಳುವವರು. ಕೆಲವು ಮಂದಿ ಸಾಧುಗಳು ಸಂಘವನ್ನು ಬಿಟ್ಟುಹೋಗಬೇಕೆಂದು ಅವರು ಬಯಸಿದ್ದರೆ, ಅವರಿಗೆ ಆ ಸಾಧುಗಳನ್ನು ಕಂಡರೆ ಇಷ್ಟವಿಲ್ಲ ಎಂದಲ್ಲ; ಅವರಿಗೆ ಕರುಣೆ ಇಲ್ಲ ಎಂದಲ್ಲ. ಅದಕ್ಕೆ ಬಲವಾದ ಕಾರಣವಿದೆ ಎಂದರ್ಥ. ಮಹಾಪುರುಷರಾದ ಸ್ವಾಮಿ ಬ್ರಹ್ಮಾನಂದರು, ಬಹುಶಃ ಆ ಸಾಧುಗಳಿಗೆ ಮತ್ತೊಂದು ಅವಕಾಶ ಕೊಡಲು ಬಯಸಿರಬಹುದು. ಕೆಲವು ವರ್ಷಗಳ ನಂತರ, ಆ ಸಾಧುಗಳು ಎಷ್ಟರ ಮಟ್ಟಿಗಾದರೆಂದರೆ, ಅವರನ್ನು ಸಂಘದಿಂದ ತೆಗೆಯಲೇಬೇಕಾಗಿ ಬಂತು; ಬೇರೆ ಮಾರ್ಗವಿರಲಿಲ್ಲ. ನಿಮ್ಮ ಮನಸ್ಸಿನಲ್ಲಿ ಸ್ವಾಮಿ ಪ್ರೇಮಾನಂದರ ಬಗ್ಗೆ ಉಂಟಾಗಿರಬಹುದಾದ ತಪ್ಪು ಅಭಿಪ್ರಾಯವನ್ನು ಸರಿಪಡಿಸಲು ನಾನು ಈ ಕಥೆಯನ್ನು ಹೇಳಿದೆ. ಅವರು ಸಹನೆಯ ಮೂರ್ತಿವೆತ್ತಂತಿದ್ದರು; ಅದು ಅವರ ಸ್ವಭಾವವಾಗಿತ್ತು.

ಅವರ ದಿನಚರಿಗೆ ಹಿಂತಿರುಗೋಣ. ತರಕಾರಿಯನ್ನು ಸಿದ್ಧಗೊಳಿಸಿದ ಮೇಲೆ ಅವರು ಗಂಗಾನದಿಯಲ್ಲಿ ಸ್ನಾನ ಮಾಡುತ್ತಿದ್ದರು. ನಂತರ ಶ್ರೀರಾಮಕೃಷ್ಣರ ಬೆಳಗಿನ ಪೂಜೆ ಮಾಡುವುದಕ್ಕೆ ಮಠದ ಎರಡನೆ ಅಂತಸ್ತಿನಲ್ಲಿದ್ದ ಮಂದಿರಕ್ಕೆ (ಈಗ ಹಳೆಯ ಮಂದಿರ) ಹೋಗುತ್ತಿದ್ದರು. ಬಹಳ ಸರಳವಾದ ಪೂಜೆ ಅವರದು. ಆದರೆ ಅದು ಕನಿಷ್ಠ ಅರ್ಧಗಂಟೆ ಧ್ಯಾನದಿಂದ ಕೂಡಿದ್ದ ಸ್ನಿಗ್ಧ ಪೂಜೆಯಾಗಿರುತ್ತಿತ್ತು. ಅವರು ಧ್ಯಾನದಲ್ಲಿ ಕುಳಿತಿಕೊಳ್ಳುತ್ತಿದ್ದ ದೃಶ್ಯ ಅಸಾಧಾರಣವಾದುದಾಗಿತ್ತು. ನೀವು ಮಂದಿರದ ಬಾಗಿಲಿನ ಬಳಿ ನಿಂತು ಅವರ ರೂಪರೇಖೆಯನ್ನು ನೋಡಬಹುದಾಗಿತ್ತು. ಅವರ ಮೂಗು, ಹಣೆ, ಮತ್ತ ದೇಹ ನೇರವಾದ ರೇಖೆಯಂತಿರುತ್ತಿತ್ತು. ಅವರು ಧ್ಯಾನ ಮತ್ತು ಮನಃಶಾಂತಿಯೇ ರೂಪವೆತ್ತಂತೆ ಕಾಣುತ್ತಿದ್ದರು. ಅವರನ್ನು ನೋಡುತ್ತಿದ್ದರೆ, ಇಡಿ ಪ್ರಪಂಚವೇ ಸ್ಥಿರವಾಗಿದ್ದಂತೆ ತೋರುತ್ತಿತ್ತು. ಧ್ಯಾನ ಮಾಡುತ್ತ ಅವರ ಮುಖ ರಕ್ತವರ್ಣವಾಗುತ್ತಿತ್ತು. ಅದರಿಂದ ಜ್ಯೋತಿ ಹೊಮ್ಮುವುದನ್ನು ನೋಡಬಹುದಾಗಿತ್ತು. ಅದೊಂದು ಅದ್ಭುತ ದೃಶ್ಯ. ಧ್ಯಾನಸ್ಥ ಬುದ್ಧನ ಅನೇಕ ಪ್ರತಿಮೆಗಳನ್ನು ಪ್ರಪಂಚದ ವಿವಿಧ ಭಾಗಗಳಲ್ಲಿ ನಾನು ನೋಡಿದ್ದೇನೆ, ಆದರೆ ಸ್ವಾಮಿ ಪ್ರೇಮಾನಂದರಷ್ಟು ಸುಂದರವಾದ ಆಕೃತಿಯನ್ನು ನಾನು ನೋಡಿಲ್ಲ. ಧ್ಯಾನ ಮಾಡುತ್ತ ಕೆಲವು ವೇಳೆ ಅವರು ಸಮಾಧಿ ಸ್ಥಿತಿಗೆ ಹೋಗುತ್ತಿದ್ದರು. ಪೂಜೆಯನ್ನು ಮುಗಿಸುವುದಕ್ಕೆ ಅವರಿಗೆ ಬಾಹ್ಯ ಪ್ರಜ್ಞೆ ಬರುವಂತೆ ಮಾಡುವ ವಿಧಾನವನ್ನು ಸಂನ್ಯಾಸಿಗಳಿಗೆ ಹೇಳಿ ಕೊಟ್ಟಿದ್ದರು.

ಪೂಜೆ ಮುಗಿಯುವ ವೇಳೆಗೆ ಸುಮಾರು ೧೨ ಗಂಟೆಯಾಗಿರುತ್ತಿತ್ತು. ಅವರು ಮೇಲಿನಿಂದ ಇಳಿದು ಬರುತ್ತಿದ್ದರು. ಅದೂ ಕೂಡ ನೋಡಲು ಒಂದು ಅತ್ಯಂತ ಸುಂದರ ದೃಶ್ಯವಾಗಿರುತ್ತಿತ್ತು. ತೆಳುವಾಗಿ, ಸಣ್ಣದಾಗಿ, ನೀಳವಾಗಿ, ಅಪರಂಜಿಯ ಬಣ್ಣ, ಧ್ಯಾನ ಮತ್ತು ಪೂಜೆಯ ನಂತರ ಹೊಳೆಯುವ ಮುಖ, ಹೂವು, ಗಂಧ, ಪರಿಮಳ ದ್ರವ್ಯ ಇರುವ ದೊಡ್ಡ ತಾಮ್ರದ ತಟ್ಟೆಯನ್ನು ಕೈಯಲ್ಲಿ ಹಿಡಿದು ಮಂದಗತಿಯಲ್ಲಿ ಇಳಿದು ಬರುತ್ತಿದ್ದರು. ಆ ಸ್ವರ್ಗೀಯ ದೃಶ್ಯವನ್ನು ನೋಡಲು ಸಂನ್ಯಾಸಿಗಳು ಮತ್ತು ಭಕ್ತರು ಅಲ್ಲೇ ಸುಳಿದಾಡುತ್ತಿದ್ದರು. ಸ್ವಾಮಿಗಳು ತಟ್ಟೆಯನ್ನು ಗಂಗಾನದಿಯ ದಡಕ್ಕೆ ತೆಗೆದುಕೊಂಡು ಹೋಗಿ ನದಿಗೆ ಪೂಜೆ ಮಾಡುತ್ತಿದ್ದರು. ನಿಮಗೆ ತಿಳಿದಂತೆ ಹಿಂದೂಗಳು ಗಂಗಾನದಿಯನ್ನು ಜೀವಂತ ದೇವತೆಯಂತೆ ಕಾಣುವರು; ನದಿ ಕೇವಲ ನೀರಲ್ಲ. ಕೆಲವರು ನದಿಯನ್ನು 'ದ್ರವರೂಪದ ಬ್ರಹ್ಮ' ಎಂದು ಕರೆಯುತ್ತಾರೆ. ಯಾರಿಗೆ ಆ ದೃಷ್ಟಿ ಇದೆಯೋ ಅವರು ನದಿಯು ದೇವರಂತೆ ಹೊಳೆಯುತ್ತಾ ಪ್ರಕಾಶಮಾನವಾಗಿ ಹರಿಯುವುದನ್ನು ನೋಡಬಹುದು.

ಗಂಗಾಪೂಜೆಯಾದ ನಂತರ, ಸ್ವಾಮಿಗಳು ಅಲ್ಪ ಉಪಾಹಾರ ತೆಗೆದುಕೊಳ್ಳುತ್ತಿದ್ದರು. ಸ್ವಲ್ಪ ಸಮಯದ ನಂತರ, ಮಧ್ಯಾಹ್ನದ ಊಟ. ಆಮೇಲೆ ಸ್ವಲ್ಪ ವಿಶ್ರಾಂತಿ. ಕೆಲವು ವೇಳೆ ಕೈಯಲ್ಲಿ ಜಪಮಾಲೆ ಹಿಡಿದು ಹಾಸಿಗೆಯ ಮೇಲೆ ಮಲಗುತ್ತಿದ್ದರು. ಅನೇಕ ವೇಳೆ ಅವರೊಂದಿಗೆ ಮಾತನಾಡಲು ಅನೇಕರು, ವಿಶೇಷವಾಗಿ ಯುವಕರು ಬರುತ್ತಿದ್ದರು. ಸ್ವಾಮಿಗಳ ವಿಶ್ರಾಂತಿಗೆ ಭಂಗ ತರಬಾರದೆಂದು ವಯಸ್ಸಾದವರು ಆ ಸಮಯದಲ್ಲಿ ಅವರೊಡನೆ ಮಾತನಾಡಲು ಬರುತ್ತಿರಲಿಲ್ಲ. ಪ್ರೇಮಾನಂದರು ಬಹುಬೇಗನೆ ವಿಶ್ರಾಂತಿಯಿಂದ ಎದ್ದು ಬಿಡುತ್ತಿದ್ದರು. ಬಳಿಕ ಪತ್ರ ಬರೆಯುತ್ತಿದ್ದರು, ಅಥವಾ ಹೇಳಿ ಬರೆಸುತ್ತಿದ್ದರು. ಅದಾದ ಮೇಲೆ ಸಂನ್ಯಾಸಿ ಮತ್ತು ಬ್ರಹ್ಮಚಾರಿಗಳಿಗೆ ಪಾಠ ಹೇಳುತ್ತಿದ್ದರು, ಒಂದೆರಡು ಗಂಟೆ ಗಳ ಕಾಲ ಆಧ್ಯಾತ್ಮಿಕ ಪ್ರವಚನ ಮಾಡುತ್ತಿದ್ದರು.

ಪ್ರವಚನವಾದ ಮೇಲೆ ಸೂರ್ಯ ಇನ್ನೂ ಹೊಳೆಯುತ್ತಿರುವಾಗಲೆ, ಛತ್ರಿ ಮತ್ತು ಒಂದು ಕೋಲನ್ನು ಒಂದೇ ಕೈಯಿಂದ ಹಿಡಿದುಕೊಂಡು ಹುಲ್ಲುಗಾವಲಿನ ಕಡೆ ನಿಧಾನವಾಗಿ ನಡೆದುಕೊಂಡು ಹೋಗುತ್ತಿದ್ದರು. ಮಠದ ಹಸುಗಳನ್ನು ಅಲ್ಲಿ ಮೇಯಲು ಬಿಟ್ಟಿರುತ್ತಿದ್ದರು. ವಿಶಾಲವಾದ ಹುಲ್ಲುಗಾವಲಿನಲ್ಲಿ ಮರಗಳ ಮಧ್ಯೆ ಪ್ರಶಾಂತವಾಗಿ ನಡೆದು ಹೋಗುತ್ತಿದ್ದ ಸ್ವಾಮಿಗಳನ್ನು ನೋಡಲು ಆನಂದವಾಗುತ್ತಿತ್ತು. ಅವರು ನೆಟ್ಟಗೆ ನಡೆಯುತ್ತಿದ್ದರು. ಕಾವಿ ಬಟ್ಟೆ ಧರಿಸಿ, ಸೊಂಟದ ಸುತ್ತ ಮತ್ತು ಹೆಗಲಿನ ಮೇಲೆ ಒಂದು ವಸ್ತ್ರ , ಚಿನ್ನದಂತಹ ಹಳದಿ ಕಾಂತಿಯ ಮೈಬಣ್ಣದಿಂದ ಕೂಡಿದ ಅವರನ್ನು ನೋಡಿದ ಯಾರಿಗಾದರೂ ಅವರ ಪಾವಿತ್ರ್ಯ ತಾಕುತ್ತಿತ್ತು;

ಧಗ ಧಗಿಸುತ್ತಿರುವ ಪಾವಿತ್ರ್ಯ ಮಠದ ಮೈದಾನದಲ್ಲಿ ನಡೆದು ಹೋಗುತ್ತಿರುವಂತೆ ಕಾಣುತ್ತಿತ್ತು. ಹಸುಗಳು ಅವರನ್ನು ತುಂಬಾ ಇಷ್ಟಪಡುತ್ತಿದ್ದುವು. ಸಾಮಾನ್ಯವಾಗಿ ಅವು ಸೌಮ್ಯವಾಗಿರುತ್ತಿರಲಿಲ್ಲ. ಜನರು ಅವುಗಳ ಹತ್ತಿರ ಹೋಗಲು ಹೆದರುತ್ತಿದ್ದರು. ಆದರೆ ಅವುಗಳೆಲ್ಲವೂ ಸ್ವಾಮಿಗಳಿಂದ ಮುದ್ದಿಸಿಕೊಳ್ಳಲು ಒಟ್ಟಿಗೆ ಸೇರುತ್ತಿದ್ದುವು. ಅವರು ಅವುಗಳ ಬೆನ್ನುತಟ್ಟಿ ಸವರುತ್ತಿದ್ದರು. ಕೆಲವು ವೇಳೆ ಅವುಗಳಿಗೆ ಸಿಹಿ ತಿಂಡಿ ಅಥವಾ ಹಣ್ಣು ತೆಗೆದುಕೊಂಡು ಹೋಗುತ್ತಿದ್ದರು. ಅವರ ಪ್ರೀತಿಯನ್ನು ಆ ದನಗಳು ನಿಸ್ಸಂದೇಹವಾಗಿ ಅನುಭವಿಸುತ್ತಿದ್ದುದನ್ನು ನೋಡಬಹುದಾಗಿತ್ತು.

ಮಧ್ಯಾಹ್ನವಾದ ಮೇಲೆ, ಕೆಲವೊಮ್ಮೆ ಸ್ವಾಮಿ ವಿವೇಕಾನಂದರ ದೇಹವನ್ನು ದಹಿಸಿದ ಸ್ಥಳದಲ್ಲಿ ಕಟ್ಟಿದ್ದ ದೇವಸ್ಥಾನದ ಬಳಿ ಅವರು ಕುಳಿತುಕೊಳ್ಳುತ್ತಿದ್ದರು. ಅಲ್ಲಿ ಸ್ವಲ್ಪ ಸಮಯ ಇದ್ದು, ನಂತರ ತಮ್ಮ ಕೊಠಡಿಗೆ ಹೋಗುತ್ತಿದ್ದರು. ಸಂಜೆ ಪೂಜೆ ಮಾಡಲು ದೇವಸ್ಥಾನಕ್ಕೆ ಹೋಗುತ್ತಿದ್ದರು. ನಂತರ ಮತ್ತೆ ಧ್ಯಾನ ಮಾಡುತ್ತಿದ್ದರು. ಸುಮಾರು ಒಂಭತ್ತು ಗಂಟೆಯ ವೇಳೆಗೆ ದೇವಸ್ಥಾನದ ಬಾಗಿಲು ಹಾಕಲಾಗುತ್ತಿತ್ತು, ಸಂನ್ಯಾಸಿಗಳು ಮತ್ತು ಭಕ್ತರು ರಾತ್ರಿಯ ಊಟ ಮಾಡುತ್ತಿದ್ದರು. ಆಮೇಲೆ ಅವರು ಮಠಕ್ಕೆ ಬಂದಿರುವ ಭಕ್ತರಿಗೆ ನಿದ್ರಿಸಲು ಹಾಸಿಗೆ ಮುಂತಾದ ಅನುಕೂಲತೆಗಳಿಗೆ ಗಮನ ಕೊಡುತ್ತಿದ್ದರು. ಕೊನೆಗೆ ಎಲ್ಲವನ್ನೂ ವಿಚಾರಿಸಿದ ಬಳಿಕ ನಿದ್ರೆಗೆ ಹೋಗುತ್ತಿದ್ದರು. ಅಷ್ಟು ಹೊತ್ತಿಗೆ ರಾತ್ರಿ ಹನ್ನೊಂದು ಗಂಟೆಯಾಗುತ್ತಿತ್ತು. ಇದು ಅವರ ದಿನಚರಿಯಾಗಿತ್ತು.

ಸ್ವಾಮಿ ಪ್ರೇಮಾನಂದರ ಜೀವನದ ಒಂದು ವಿಶೇಷವೆಂದರೆ, ಅವರು ಬೇಲೂರು ಮಠದ ಮುಖ್ಯಸ್ಥರಾಗಿದ್ದಾಗ ಅಲ್ಲಿಗೆ ಬರುತ್ತಿದ್ದ ಭಕ್ತರನ್ನು ನೋಡಿಕೊಳ್ಳುತ್ತಿದ್ದ ರೀತಿ. ಅವರು ಭಕ್ತರನ್ನು ಮಾತನಾಡಿಸುತ್ತಿದ್ದರು, ಅವರಿಗೆ ತಿಳಿವಳಿಕೆ ನೀಡುತ್ತಿದ್ದರು. ಅದ್ಭುತ ಪ್ರೇಮಶಕ್ತಿಯಿಂದ ಅವರಿಗೆ ಹೇಗೆ ಮಾರ್ಗದರ್ಶನ ಮಾಡುತ್ತಿದ್ದರೆಂದರೆ, ಅವರೆಲ್ಲ ದುಂಬಿಗಳು ಹೂವಿಗೆ ಆಕರ್ಷಿಸಲ್ಪಡುವಂತೆ ಪ್ರೇಮಾನಂದರತ್ತ ಆಕರ್ಷಿತರಾಗುತ್ತಿದ್ದರು. ಸುಮ್ಮನೆ ಅವರ ಹತ್ತಿರ ವಿದ್ದರೆ ಏನನ್ನೋ ಅನುಭವಿಸಿದಂತಾಗುತ್ತಿತ್ತು. ದೇವರು ಅಲ್ಲಿ ಇಲ್ಲವೆಂದು ಹೇಳಲಾಗುತ್ತಿರಲಿಲ್ಲ – ಕಣ್ಣಿಗೆ ಕಾಣುವ, ಸಾನ್ನಿಧ್ಯವನ್ನು ಅನುಭವಿಸಬಹುದಾದ ದೇವರು ತಮ್ಮೊಂದಿಗೆ ಇದ್ದಂತಾಗುತ್ತಿತ್ತು. ಅವರ ಶ್ರದ್ಧೆ ಬಲವಾಗುತ್ತಿತ್ತಷ್ಟೇ ಅಲ್ಲ, ದೇವರ ಸಾನ್ನಿಧ್ಯವನ್ನು ಅನುಭವಿಸಬಹುದಾಗಿತ್ತು. ಆದುದರಿಂದ ಜನರು ಹೆಚ್ಚು ಸಂಖ್ಯೆಯಲ್ಲಿ ಬರುತ್ತಿದ್ದರು. ಭಾನುವಾರಗಳಂದು ಸಾಧಾರಣವಾಗಿ ನಾನೂರರಿಂದ ಐನೂರು ಜನ ಇರುತ್ತಿದ್ದರು. ಕಲ್ಕತ್ತೆಯಿಂದ ಕಾಲೇಜು ವಿದ್ಯಾರ್ಥಿಗಳು ದೊಡ್ಡ ಸಂಖ್ಯೆಯಲ್ಲಿ ಸೇರುತ್ತಿದ್ದರು. ಸಂನ್ಯಾಸಿಗಳು ಭಕ್ತರ ಸೇವೆಯನ್ನು ಮಾಡುವುದು ಬಹಳ ಮುಖ್ಯವೆಂದು ಸ್ವಾಮಿ ಪ್ರೇಮಾನಂದರು ಭಾವಿಸುತ್ತಿದ್ದರು. ಆದುದರಿಂದ ಯಾರೇ ಬಂದರೂ ಊಟ ಮಾಡಬೇಕಾಗಿತ್ತು. ಕೆಲವು ವೇಳೆ ಊಟ ಮುಗಿದ ನಂತರ ಭಕ್ತರು ಬರುತ್ತಿದ್ದರು. ಆಗ ಸ್ವಾಮಿಗಳು ತಾವೇ ಅಡಿಗೆಮನೆಗೆ ಹೋಗಿ ಅಡಿಗೆ ಮಾಡಲು ಪ್ರಾರಂಭಿಸುತ್ತಿದ್ದರು. ಇತರ ಸಂನ್ಯಾಸಿಗಳು ಅವರನ್ನು ಬಿಡುತ್ತಿರಲಿಲ್ಲ. ಆದರೆ ಅವರು, ''ನೀವು ಕಷ್ಟಪಟ್ಟು ಕೆಲಸ ಮಾಡಿದ್ದೀರಿ. ನಾನು ಮಾಡುತ್ತೇನೆ, ಬಿಡಿ'' ಎಂದು ಹೇಳುತ್ತಿದ್ದರು. ಕೆಲವು ವೇಳೆ ಜನರು ಬಹಳ ರಾತ್ರಿಯಾದ ಮೇಲೆ ಬರುತ್ತಿದ್ದರು. ಅವರು ಊಟ ಮಾಡಬೇಕಾಗಿದ್ದರೆ, ಸಂನ್ಯಾಸಿಗಳು ಎದ್ದು ಅಡಿಗೆ ಮಾಡುತ್ತಿದ್ದರು. ಆಗಂತುಕರಿಗೆ ಹಾಸಿಗೆ ಇಲ್ಲದಿದ್ದರೆ, ಸಂನ್ಯಾಸಿಗಳು ತಮ್ಮ ಹಾಸಿಗೆಯನ್ನೇ ಕೊಡಬೇಕಾಗುತ್ತಿತ್ತು.

ಭಕ್ತರ ಮೇಲೆ ಸ್ವಾಮಿ ಪ್ರೇಮಾನಂದರಿಗೆ ಅಷ್ಟೊಂದು ಪ್ರೀತಿ! ಅವರು ಸಂನ್ಯಾಸಿಗಳೊಂದಿಗೆ ನಿಷ್ಠುರವಾಗಿ ಇರುತ್ತಿದ್ದರು. ಆದರೆ, ಭಕ್ತರಿಗೆ ರಾಜೋಪಚಾರ. ಅವರಿಗಾಗಿ ಎಲ್ಲ ತೊಂದರೆಯನ್ನೂ ತೆಗೆದುಕೊಳ್ಳುತ್ತಿದ್ದರು. ಈ ಬಗೆಯ ನಿಸ್ವಾರ್ಥ, ಅದ್ಭುತ ಸೇವೆಯನ್ನು ಸಂನ್ಯಾಸಿಗಳಿಗೆ ಕಲಿಸಿದರು. ಕೆಲವರಿಗೆ ನಿದ್ರೆ ಮಾಡಲು ಅವಕಾಶವೇ ಇರುತ್ತಿರಲಿಲ್ಲ. ಅವರಲ್ಲೊಬ್ಬರು ನನಗೆ ಹೀಗೆ ಹೇಳಿದ್ದಾರೆ: ''ಆ ದಿನಗಳಲ್ಲಿ ನನಗೆ ನಿದ್ರೆ ಮಾಡಲು ಸಮಯವೇ ದೊರೆಯುತ್ತಿರಲಿಲ್ಲ. ಒಂದು ಬೆಂಚಿನ ಮೇಲೆ ಎರಡು ಅಥವಾ ಮೂರು ಗಂಟೆಗಳ ಕಾಲ ಸುಮ್ಮನೆ ಬಿದ್ದುಕೊಳ್ಳುತ್ತಿದ್ದೆ. ಕಿರಿಯ ಸಂನ್ಯಾಸಿಗಳೇನಾದರೂ ಗೊಣಗಿದರೆ ಸ್ವಾಮಿಗಳು ಹೇಳುತ್ತಿದ್ದರು, 'ನೋಡಿ, ಪ್ರಪಂಚದಲ್ಲಿ ಜನರು ಎಷ್ಟೊಂದು ಕಷ್ಟಪಡುತ್ತಾರೆ! ಸ್ವಲ್ಪ ಶಾಂತಿಗಾಗಿ ಅವರು ಶ್ರೀರಾಮಕೃಷ್ಣರ ಸ್ಥಳಕ್ಕೆ ಬರುತ್ತಿದ್ದಾರೆ. ಅವರಿಗೆ ಇಲ್ಲಿ ಸ್ವಾಗತವಿದೆ ಎಂದು ಅವರು ಭಾವಿಸುವಂತೆ ಮಾಡಬೇಕಾದುದು ನಿಮ್ಮ ಕರ್ತವ್ಯ. ಅದು ನಿಮಗೆ ಬಹು ಪ್ರಯೋಜನಕಾರಿ; ಅದು ಅವರಿಗೂ ಬಹಳ ಪ್ರಯೋಜನಕಾರಿ.' ''

ಕೆಲವು ಸಂನ್ಯಾಸಿಗಳು ಈ ಬಗೆಯ ವ್ಯವಸ್ಥೆಯನ್ನು ವಿರೋಧಿಸಿದ ಕಾಲವೂ ಬಂತೆಂದು ತಿಳಿಸಲು ನನಗೆ ವಿಷಾದವಾಗುತ್ತದೆ. ಅವರು ಎಷ್ಟರಮಟ್ಟಿಗೆ ಅತಿಯಾಗಿ ಕಷ್ಟಪಟ್ಟು ಕೆಲಸ ಮಾಡಬೇಕಾಗುತ್ತಿತ್ತು ಎಂದರೆ, ನಿದ್ರೆ ಮಾಡುವುದಕ್ಕೆ ಮತ್ತು ವಿಶ್ರಾಂತಿಗೆ ಸಮಯ ಸಾಲದೆ, ಸರಿಯಾಗಿ ಧ್ಯಾನ ಮಾಡಲಾಗುತ್ತಿಲ್ಲವೆಂದು ಸ್ವಾಮಿ ಬ್ರಹ್ಮಾನಂದರಿಗೆ ಪತ್ರ ಬರೆದರು. ಸ್ವಾಮಿ ಬ್ರಹ್ಮಾನಂದರು ಈ ಬಗ್ಗೆ ಯೋಚಿಸಿದರು. ನೈಜ ಪ್ರವಾದಿಗಳಾದ ಅವರು ಭವಿಷ್ಯವನ್ನೂ ಕಾಣಬಲ್ಲವರಾಗಿದ್ದರು. ಸ್ವಾಮಿ ಪ್ರೇಮಾನಂದರು ಇನ್ನು ಹೆಚ್ಚು ಕಾಲ ಬದುಕುವುದಿಲ್ಲ, ಅವರ ಸ್ಥಾನಕ್ಕೆ ಮತ್ತೊಬ್ಬರನ್ನು ತರಪೇತು ಮಾಡಬೇಕಾಗುವುದೆಂದು ಅವರಿಗೆ ತಿಳಿದಿತ್ತು. ಆದ್ದ ರಿಂದ ಅವರು ಸ್ವಾಮಿ ಶಿವಾನಂದರನ್ನು ಪ್ರೇಮಾನಂದರಿಂದ ತರಪೇತು ಪಡೆಯಲು, ಅವರ ನಂತರ ಜವಾಬ್ದಾರಿಯನ್ನು ತೆಗೆದುಕೊಳ್ಳಲು ಬೇಲೂರು ಮಠಕ್ಕೆ ಕಳುಹಿಸಿದರು. ಕಿರಿಯ ಸಂನ್ಯಾಸಿಗಳು ಹೀಗೆ ಅವರನ್ನು ವಿರೋಧಿಸಿದ ರೀತಿಯಿಂದ ಅವರ ಮನಸ್ಸು ಬಹಳ ನೊಂದಿತೆಂದು ಸ್ವಾಮಿ ಪ್ರೇಮಾನಂದರು ಸಂನ್ಯಾಸಿಗಳೊಬ್ಬರಿಗೆ

ಮನ ಬಿಚ್ಚಿ ಹೇಳಿದರು. ಆ ಸಂನ್ಯಾಸಿಗಳಿಂದ ನನಗೆ ಈ ವಿಷಯ ತಿಳಿಯಿತು. ಸ್ವಾಮಿಗಳು ಕಿರಿಯ ಸಂನ್ಯಾಸಿಗಳನ್ನು ಆದರದಿಂದ ನೋಡಿಕೊಂಡು ವಿಚಕ್ಷಣೆಯಿಂದ ತರಪೇತು ಮಾಡಿದ್ದರು.ಆದ್ದರಿಂದ ಅವರಿಗೆ ಈ ಘಟನೆ ಹಿಡಿಸಲಿಲ್ಲವೆಂಬುದನ್ನು ನೀವು ಅರ್ಥ ಮಾಡಿಕೊಳ್ಳಬಹುದು. ಏನೇ ಆದರೂ ಸ್ವಾಮಿಗಳು ಇದನ್ನು ವಿರೋಧಿಸಲಿಲ್ಲ. ಸ್ವಾಮಿ ಶಿವಾನಂದರು ಬೇಗನೆ ಇವರ ಕೆಲಸಗಳನ್ನು ಕಲಿತುಕೊಂಡ ನಂತರ, ಸ್ವಾಮಿ ಪ್ರೇಮಾನಂದರು ಕಲ್ಕತ್ತೆಯಲ್ಲಿದ್ದ ಬಲರಾಮ ಬೋಸರ ಮನೆಯಲ್ಲೇ ಇದ್ದುಬಿಡಲು ಹೋದರು. ಇದು ನಡೆದುದು ೧೯೧೬ರಲ್ಲಿ.

ಅವರು ಬೇಲೂರು ಮಠದಿಂದ  ನಿರ್ಗಮಿಸಿದ ದೃಶ್ಯ ಅಸಾಧಾರಣವಾದುದೆಂದು ಹೇಳುತ್ತಾರೆ. ಅನೇಕ ವರ್ಷಗಳಿಂದ ಅವರಿಗೆ ಅಸಂಖ್ಯ ಉಡುಗೊರೆಗಳು, ಪಾರಿತೋಷಕಗಳು ಬಂದಿದ್ದುವು. ಆದರೆ ಅವರು ತಮ್ಮೊಡನೆ ಚೌಕವೊಂದರಲ್ಲಿ ಕಟ್ಟಿದ್ದ ಒಂದು ಬನಿಯನ್ ಮತ್ತು ಒಂದು ಹೊದೆಯುವ ವಸ್ತ್ರವನ್ನಷ್ಟೇ ಒಯ್ದರು. ಅವರಲ್ಲಿದ್ದುದು ಅಷ್ಟೆ – ಒಂದು ಜೊತೆ ಚಪ್ಪಲಿ, ಒಂದು ಕೊಡೆ, ಮತ್ತು ಒಂದು ಕೋಲು. ಅವರಲ್ಲಿ ಪ್ರತಿಯೊಂದೂ ಅತ್ಯಂತ ಸರಳವಾಗಿತ್ತು. ಇದು ಅವರ ಜೀವನದಿಂದ ನಾವು ಕಲಿತ ವಿಷಯಗಳಲ್ಲೊಂದು: ಎಲ್ಲಿಯವರೆಗೆ ಸ್ವಾರ್ಥದ ನೆರಳು ಅಲ್ಪಸ್ವಲ್ಪವಾದರೂ ಇರುವುದೊ, ಎಲ್ಲಿಯವರೆಗೆ ತಮ್ಮದೆಂಬುದು ಇರುವುದೊ ಅಲ್ಲಿಯವರೆಗೆ ಅವರು ದೇವರನ್ನು ನಿಜವಾಗಿ ಪ್ರೀತಿಸಲಾರರು. ನಿಮ್ಮಲ್ಲಿ ಕೆಲವರು ಭಾವಿಸಬಹುದು, ನಿಜವಾಗಿ ತಿಳಿದುಕೊಳ್ಳಬೇಕಾದುದು ಕೆಲವು ಚಮತ್ಕಾರಗಳು – ಸ್ವಲ್ಪ ಧ್ಯಾನ ಮಾಡುವುದು, ನಿಮ್ಮಲ್ಲಿ ಇರುವುದನ್ನೆಲ್ಲ ಬಿಸಾಡುವುದು, ಎಲ್ಲಿಯಾದರೂ ಓಡಿಹೋಗಿ ಸಂನ್ಯಾಸಿ ಅಥವಾ ಸಂನ್ಯಾಸಿನಿಯಾಗುವುದು – ಇಷ್ಟರಿಂದ ನೀವು ಆಧ್ಯಾತ್ಮಿಕ ವ್ಯಕ್ತಿಗಳಾಗುವಿರಿ ಎಂದು. ಇವುಗಳಿಗೆ ಒಂದು ಬೆಲೆ ಇದೆ. ಆದರೆ ಮುಖ್ಯವಾಗಿ ಬೇಕಾದುದು, 'ನನ್ನ ಪಾಲಿಗೆ ದೇವರು ಮಾತ್ರ ಇರುವನು, ಮತ್ತೇನೂ ಇಲ್ಲ' ಎಂದು ಹೇಳಲು ಶಕ್ತನಾಗುವುದು.  ನನಗೆ ಯಾವುದೂ ಬೇಡ; ದೇವರು ಮಾತ್ರವೇ ಬೇಕು. ಅದನ್ನು ಹೇಳುವುದೇ ದೊಡ್ಡ ಸಂಗತಿ. ಒಮ್ಮೆ ಸ್ವಾಮಿ ಪ್ರೇಮಾನಂದರು ಸ್ವಾಮೀಜಿ ಬೋಧಿಸಿದಂತೆ, ಮಾನವನಲ್ಲಿರುವ ದೇವರನ್ನು ಪೂಜಿಸಬೇಕೆಂದು ಮಾತನಾಡುತ್ತಿರುವಾಗ, ಶ್ರೋತೃವೊಬ್ಬ, ''ಪ್ರೀತಿಯ ಬಗ್ಗೆ ಸ್ವಲ್ಪ ಹೇಳಿ'' ಎಂದು ಪೀಡಿಸಿದನಂತೆ. ಸ್ವಾಮಿಗಳು ಅವನ ಕಡೆ ತಿರುಗಿ, ''ಆಗಲಿ, ನಾನು ಪ್ರೀತಿಯ ಬಗ್ಗೆ ಮಾತನಾಡಲು ಸಿದ್ಧ. ನೀನು ಅದರ ಬೆಲೆಯನ್ನು ತೆರಬಲ್ಲೆಯಾ? ನಿನಗೆ ಪ್ರೀತಿಯ ಬೆಲೆ ಗೊತ್ತೆ? ನಿನ್ನ ತಲೆಯನ್ನೇ ಕೊಡಬೇಕಾಗುವುದು. ನಿನ್ನ ತಲೆಯನ್ನೇ ದೇವರಿಗೆ ಕೊಡಲು ಸಿದ್ಧನಾಗಿರುವೆಯಾ? ಆಗ ಮಾತ್ರವೇ ನೀನು 'ಪ್ರೀತಿ' ಎಂದರೆ ಏನು ಎಂಬುದನ್ನು ತಿಳಿದುಕೊಳ್ಳಬಲ್ಲೆ'' ಎಂದು ಹೇಳಿದರು. ನಾವು ಈ ಸ್ವಾಮಿಗಳ ಜೀವನದಲ್ಲಿ ಕಂಡಿದ್ದು ಈ ಬಗೆಯ ಪ್ರೀತಿಯ ಆವಿರ್ಭಾವವನ್ನೆ. ಅವರ ಬಳಿ ಏನೂ ಇರಲಿಲ್ಲ. ಅವರಿಗೆ ಏನೂ ಬೇಕಾಗಿರಲಿಲ್ಲ. ಈ ಬಗೆಯ ಅತ್ಯಂತ ಸರಳತೆಯಲ್ಲಿ ನೀವು ಯಾವಾಗಲೂ ದೇವರನ್ನು ಮತ್ತು ಅವನ ಸಾನ್ನಿಧ್ಯವನ್ನು ಅನುಭವಿಸಬಹುದು. ಅಲ್ಲಿ ಅದು ಸಿಗದಿರಲು ಸಾಧ್ಯವೇ ಇಲ್ಲ.

–೫–

ಸ್ವಾಮಿ ಪ್ರೇಮಾನಂದರು ಬೇಲೂರು ಮಠದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ ಈ ಸಮಯದಲ್ಲೇ ನಾನು ಅವರ ಸಂಪರ್ಕಕ್ಕೆ ಬಂದುದು.  ನನ್ನ ಕೆಲವು ವೈಯುಕ್ತಿಕ ನೆನಪುಗಳನ್ನು ನಿಮಗೆ ಹೇಳಿದರೆ ನೀವು ಅನ್ಯಥಾ ಭಾವಿಸಲಾರಿರಿ ಎಂದು ತಿಳಿಯುತ್ತೇನೆ. ಈ ಸಂದರ್ಭದಲ್ಲಿ ನನ್ನ ವಿಷಯವಾಗಿ ಸ್ವಲ್ಪ ಹೇಳಬೇಕಾಗುವುದು. ನಾನು ೧೯೧೨ರ ಪ್ರಾರಂಭದಲ್ಲಿ ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗ ಮೊದಲ ಬಾರಿ ಬೇಲೂರು ಮಠಕ್ಕೆ ಹೋಗಿ, ಸ್ವಾಮಿ ಪ್ರೇಮಾನಂದರನ್ನು ಮೊದಲ ಬಾರಿ ಭೇಟಿಯಾದ ವಿಷಯವನ್ನು ಆಗಲೆ ಹೇಳಿದ್ದೇನೆ. ಇನ್ನೊಂದು ವರ್ಷದವರೆಗೆ ನಾನು ಅವರನ್ನು ನೋಡಲಾಗಲಿಲ್ಲ. ಆ ವೇಳೆಗೆ ನಾನೇ ಸ್ವಲ್ಪ ಬದಲಾಗಿದ್ದೆ. ಆಧ್ಯಾತ್ಮಿಕ ಜೀವನವೇ ಎಲ್ಲಕ್ಕಿಂತಲೂ ಮುಖ್ಯವಾದುದು ಎಂಬುದನ್ನು ಅರ್ಥಮಾಡಿಕೊಂಡಾಗ ನಾನು ಪ್ರೌಢ ಶಾಲೆಯಲ್ಲಿದ್ದೆ. ಪೂರ್ವ ಬಂಗಾಲದ ಪಟ್ಟಣವೊಂದರ ಕಾಲೇಜನ್ನು ಸೇರಿದ ಬಳಿಕ ನನ್ನ ಮುಂದಿನ ಜೀವನ ಇನ್ನೂ ಸ್ಪಷ್ಟವಾಗಬೇಕೆಂಬ ಆಳವಾದ ಅತೃಪ್ತಿ ಮನಸ್ಸಿನಲ್ಲಿ ಎದ್ದಿತು. ನನ್ನ ಜೀವನದ ಬಗ್ಗೆ ತೀರ್ಮಾನ ಕೈಗೊಳ್ಳಲು ನನಗೆ ಸಹಾಯ ಬೇಕಾಯಿತು. ನನ್ನ ಮನಃಸ್ಥಿತಿ ಹೀಗಿದ್ದಾಗ ೧೯೧೩ರ ಶರತ್ಕಾಲದಲ್ಲಿ ನನ್ನ ಸ್ನೇಹಿತರೊಡನೆ ಇರಲು ಕಲ್ಕತ್ತೆಗೆ ಹೋದೆ. ಅಲ್ಲಿಂದ ಬೇಲೂರು ಮಠಕ್ಕೆ ಮೂರು ದಿನಗಳ ಕಾಳಿಪೂಜೆಯನ್ನು ನೋಡಲು ಹೋದೆ. ಆ ಸಮಯದಲ್ಲಿ ಅಲ್ಲಿ ಇದ್ದ ದೊಡ್ಡ ಸ್ವಾಮಿಗಳು ಸ್ವಾಮಿ ಪ್ರೇಮಾನಂದರು ಮಾತ್ರ. ಮೊದಲ ದಿನದ ಪೂಜೆ ನನಗೆ ಇನ್ನೂ ನೆನಪಿದೆ. ಸ್ವಾಮಿ ಪ್ರೇಮಾನಂದರು ಮಠದ ಮುಖ್ಯ ಕಟ್ಟಡದ ಮಹಡಿಯ ವರಾಂಡದಲ್ಲಿ ಗಂಗಾನದಿಗೆ ಅಭಿಮುಖವಾಗಿ, ಕೆಲವು ಸಂನ್ಯಾಸಿಗಳು ಮತ್ತು ಭಕ್ತರೊಡನೆ ಮಾತನಾಡುತ್ತ ಕುಳಿತಿದ್ದರು. ನನ್ನ ಇಬ್ಬರು ಮಿತ್ರರು ಮತ್ತು ನಾನು ಅವರ ಎದುರಿನಲ್ಲಿ, ಮೂಲೆಯಲ್ಲಿ ನಿಂತಿದ್ದೆವು. ಬೇಲೂರು ಮಲೇರಿಯಾದ ಸ್ಥಳವಾಗಿತ್ತು. ಅವರಿಗೆ ಮಲೇರಿಯಾ ಜ್ವರ ಬಂದಿತ್ತು; ಭಕ್ತರೊಬ್ಬರು ಅವರಿಗೆ ಗಾಳಿ ಬೀಸುತ್ತಿದ್ದರು. ಗಾಳಿ ಹಾಕಲು ನನಗೆ ಕೊಟ್ಟಿದ್ದಿದ್ದರೆ ಎಷ್ಟು ಚೆನ್ನಾಗಿತ್ತೆಂದು ನಾನು ಯೋಚಿಸುತ್ತಿದ್ದೆ. ಇದ್ದಕ್ಕಿದ್ದಂತೆ ಅವರು ನನ್ನ ಕಡೆ ನೋಡಿದರು, ಅವರ ಬಳಿಗೆ ಹೋಗುವಂತೆ ನನಗೆ ಸನ್ನೆ ಮಾಡಿದರು. ಗಾಳಿ ಹಾಕುತ್ತಿದ್ದ ಹುಡುಗನಿಗೆ, 'ಬೀಸಣಿಗೆಯನ್ನು ಅವನಿಗೆ ಕೊಡು' ಎಂದರು. ನಾನು ಅದನ್ನು ತೆಗೆದುಕೊಂಡು ಅವರಿಗೆ ಬೀಸಿದೆ. ಸ್ವಲ್ಪ ಸಮಯದ ನಂತರ ಅವರು ತಮ್ಮ ಕೋಣೆಗೆ ಹೋದರು. ನನ್ನ ಮಿತ್ರರು ಮತ್ತು ನಾನು ಅವರನ್ನು ಹಿಂಬಾಲಿಸಿದೆವು. ಅವರು

ಮಲಗಿಕೊಂಡು ನಮ್ಮೊಡನೆ ಒಂದೆರಡು ಮಾತುಗಳನ್ನಾಡಿದರು. ನಮಗೆ ಸಂಕೋಲೆಗಳಿವೆಯೇ ಎಂದು ಪ್ರಶ್ನಿಸಿದರು. ನನ್ನ ಮಿತ್ರರಿಗೆ ಅದು ಅರ್ಥವಾಗಲಿಲ್ಲ. ಅರ್ಥವಾಯಿತೇ ಎಂದು ನನ್ನನ್ನು ಕೇಳಿದರು. ನಮಗೆ ಮದುವೆಯಾಗಿದೆಯೇ ಎಂದು ಅವರು ನಮ್ಮನ್ನು ಕೇಳುತ್ತಿದ್ದಾರೆ ಎಂದೆ. ''ಇಲ್ಲ'' ಎಂದು ನಾನು ಉತ್ತರಿಸಿದೆ. ''ಅದು ಬಹಳ ಒಳ್ಳೆಯದು'' ಎಂದು ಹೇಳಿ, ''ನನಗೆ ಆರೋಗ್ಯ ಸರಿಯಿಲ್ಲ, ಇಂದು ನಿಮ್ಮೊಡನೆ ಮಾತನಾಡಲಾರೆ, ಕ್ಷಮಿಸಿ. ಮತ್ತೊಮ್ಮೆ ಬನ್ನಿ, ಮಾತನಾಡೋಣ'' ಎಂದರು.

ಕೆಲವು ದಿನಗಳ ನಂತರ ನಾನು ಕಲ್ಕತ್ತೆಯಿಂದ ಬೇಲೂರು ಮಠಕ್ಕೆ ಹೋದೆ. ಬೆಳಿಗ್ಗೆ ಮುಂಜಾನೆಯೇ ಹೋಗಿದ್ದೆ. ಸ್ವಾಮಿ ಪ್ರೇಮಾನಂದರು ತರಕಾರಿ ರಾಶಿಯ ಮಧ್ಯದಲ್ಲಿ ಅಡಿಗೆ ಮನೆಯ ಹತ್ತಿರ ಕುಳಿತಿದ್ದನ್ನು ಕಂಡೆ. ಆ ಗುಂಪಿನಲ್ಲಿ ನಾನೂ ಕುಳಿತೆ. ಅವರು ನನ್ನ ಬಗ್ಗೆ ಎಲ್ಲ ಬಗೆಯ ಪ್ರಶ್ನೆಗಳನ್ನು ಕೇಳತೊಡಗಿದರು – ನಾನು ಯಾರು, ನನ್ನ ಹೆಸರೇನು, ನಾನು ಏನು ಮಾಡುತ್ತಿರುವೆ ಎಂಬುದಾಗಿ. ಅದೊಂದು ಸ್ಮರಣೀಯ ದಿನ, ಅದೇಕೆ ನನ್ನ ಜೀವನದಲ್ಲೇ ಅತ್ಯಂತ ಸ್ಮರಣೀಯವಾದ ದಿನ. ಏಕೆಂದರೆ ಆ ದಿನ ಅವರು ನಾನು ಸಂಘದ ಸದಸ್ಯನಾಗುವೆನೆಂಬ ಭರವಸೆಯನ್ನಿತ್ತರು. ಅದು ನನ್ನ ಊಹೆಗೆ ನಿಲುಕದುದಾಗಿತ್ತು. ನೋಡಿ, ಸಂಘವನ್ನು ಸೇರುವುದು ಅತ್ಯಂತ ಕಷ್ಟದ ವಿಷಯವಾಗಿತ್ತು; ಸಂಘದಿಂದ ನಾನು ಸ್ವೀಕೃತನಾಗುವುದು ಅತ್ಯಂತ ಗೌರವದ ವಿಷಯವಾಗಿತ್ತು. ಸಂಜೆಯ ಪೂಜೆಯಾದ ನಂತರ ಅವರು ನನ್ನೊಡನೆ ಮಾತನಾಡಲಾರಂಭಿಸಿದರು. ''ಬಾ, ನನ್ನ ಕೋಣೆಗೆ ಬಾ'' ಎಂದರು. ನಾನು ಅವರೊಡನೆ ಹೋದೆ. ಅವರು ನನ್ನನ್ನು ಆಲಂಗಿಸಿದರು. ಅವರು ಅಂದು ಅನಂತ ಕೃಪಾಮಯರಾಗಿದ್ದರು. ಅತ್ಯಂತ ಆತ್ಮೀಯತೆಯಿಂದ ನಾವು ಮಾತನಾಡಿದೆವು. ಮತ್ತೆ ಮತ್ತೆ ಅವರು ನನ್ನನ್ನು ಅವರ ಸ್ವಂತದವನೆಂದು ಹೇಳಿದರು. ನಾನು ನಿಜವಾಗಿಯೂ ಶ್ರೀರಾಮಕೃಷ್ಣರ ಶಿಷ್ಯರಿಗೆ ಸೇರಿದವನೆಂದು ನನಗೆ ಅನುಭವವಾಯಿತು; ನಾನು ಆ ದಿವ್ಯ ಸಾನ್ನಿಧ್ಯದ ಭಾಗವಾದೆ. ಆ ಬಗ್ಗೆ ಊಹೆ, ಕಲ್ಪನೆ ಅಥವಾ ನಿರ್ಣಯದ ಅಗತ್ಯವಿರಲಿಲ್ಲ. ಮಠದಲ್ಲಿ ಭಗವಂತನ ಇರವನ್ನು ಸ್ಪಷ್ಟವಾಗಿ ಅನುಭವಿಸಬಹುದಾಗಿತ್ತು; ಆತ್ಮಕ್ಕೆ ಸಂಬಂಧಪಟ್ಟ ಈ ವಿಷಯಗಳು ಸತ್ಯವಾಗಿದ್ದುವು. ಇದೀಗ ನನ್ನ ಭವಿಷ್ಯ ಜೀವನ ಸದೃಢವಾಯಿತೆಂದು ನನಗೆ ತಿಳಿಯಿತು; ನನಗಿದ್ದ ಅತೃಪ್ತಿ ಹೊರಟು ಹೋಯಿತು. ಅವರಿಂದ ನನಗೆ ದೊರೆತ ಆಶೀರ್ವಾದ ಮಹತ್ತರವಾದುದಾಗಿತ್ತು. ಆಗಿನ ಎಲ್ಲ ವಿವರಗಳನ್ನೂ ನಾನು ನೀಡಲಾರೆ. ಏಕೆಂದರೆ ಅವು ಬಹಿರಂಗವಾಗಿ ಹೇಳಲಾರದಷ್ಟು ವೈಯಕ್ತಿಕವಾದವು. ಆದರೆ ಅಂತಹ ಆಶೀರ್ವಾದವನ್ನು ಎಲ್ಲೋ ಕೆಲವರಿಗೆ ಮಾತ್ರ ಮಾಡಿರುವುದಾಗಿ ಆ ಸಂದರ್ಭದಲ್ಲಿ ಅವರೇ ನನಗೆ ಹೇಳಿದರು. ಆ ಪದಗಳನ್ನು ಇಂಗ್ಲಿಷ್‌ನಲ್ಲಿ ''very few, very few''ಎಂದು ಹೇಳಿದರು. ಮಠದಲ್ಲಿ ನಾನು ಅನೇಕ ದಿನ ಇರಬೇಕೆಂದು ಅವರು ಇಚ್ಛಿಸಿದರು. ಆದರೆ ಮಿತ್ರರಿಗೆ ನನ್ನ ಸುಯೋಗದ ವಿಷಯವನ್ನು ತಿಳಿಸಲು ನಾನು ಕಾತರನಾಗಿದ್ದೆ. ಆದ್ದರಿಂದ ನಾನು ಕಲ್ಕತ್ತೆಗೆ ಹಿಂತಿರುಗಿದೆ – ಅದೇ ನಾನು ಮಾಡಿದ ತಪ್ಪು.

ನಾನು ಕಲ್ಕತ್ತೆಯಲ್ಲಿ ಇದ್ದ ತಿಂಗಳಿನಲ್ಲಿ ಅವರನ್ನು ಅನೇಕ ಬಾರಿ ಭೇಟಿಯಾದೆ. ನಂತರ ನಾನು ಕಾಲೇಜು ಓದುತ್ತಿದ್ದ ಊರಿಗೆ ಹಿಂತಿರುಗಿದೆ. ಆ ಸಮಯದಲ್ಲಿ ನನ್ನ ಆಧ್ಯಾತ್ಮಿಕ ಶ್ರದ್ಧೆ ತೀವ್ರವಾಯಿತು. ಬೆಂಕಿ – ತ್ಯಾಗದ ಬೆಂಕಿ ನನ್ನಲ್ಲಿ ಹೊತ್ತಿಕೊಂಡಂತಾಯಿತು. ಎಲ್ಲವನ್ನೂ ತೊರೆದು ಕೂಡಲೆ ಮಠವನ್ನು ಸೇರಿಬಿಡಬೇಕೆನ್ನಿಸಿತು. ಹಾಗಾಗಿ ಸ್ವಾಮಿಗಳಿಗೆ ಪತ್ರ ಬರೆದೆ: 'ಸ್ವಾಮೀಜಿ, ನನಗೆ ಈಗ ಕಾಲೇಜನ್ನು ಬಿಡಬೇಕೆನ್ನಿಸಿದೆ. ನೀವು ಅನುಮತಿ ಇತ್ತರೆ, ನಾನು ಬಂದು ಮಠವನ್ನು ಸೇರುತ್ತೇನೆ.' ಅವರು ದೀರ್ಘವಾದ ಮತ್ತು ವಿಶ್ವಾಸಪೂರ್ವಕ ಪತ್ರವನ್ನು ಬರೆದರು. ಪತ್ರ ವಿಶ್ವಾಸಪೂರ್ವಕವಾಗಿದ್ದರೂ, ನಾನು ವ್ಯಾಸಂಗನ್ನು ಮುಂದುವರಿಸಬೇಕೆಂಬುದು ಅವರ ನಿರ್ಧಾರವಾಗಿತ್ತು. ವಿದ್ಯಾಭ್ಯಾಸವಿಲ್ಲದವನು ಸಂನ್ಯಾಸಿಯಾಗುವುದು ಒಂದು ಹಿಂಸೆ. ಶ್ರೀರಾಮಕೃಷ್ಣರ ಮತ್ತು ಸ್ವಾಮಿ ವಿವೇಕಾನಂದರ ಬೋಧನೆಗಳು ಬಹು ಆಳವಾಗಿರುವುದರಿಂದ ಅವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಪಾಂಡಿತ್ಯ ಬೇಕಾಗುವುದು; ಆದುದರಿಂದ ಕಲ್ಕತ್ತ ವಿಶ್ವವಿದ್ಯಾಲಯದಿಂದ ಕನಿಷ್ಠ ಪಕ್ಷ ಒಂದು ಪದವಿಯನ್ನು ಪಡೆದಿರಬೇಕು ಎಂದು ತಿಳಿಸಿದರು. ಹಾಗಿಲ್ಲದಿದ್ದರೆ, ನಿನ್ನನ್ನು ಮಠಕ್ಕೆ ಸೇರಿಸಿಕೊಳ್ಳಲಾಗುವುದಿಲ್ಲ ಎಂದು ಸೇರಿಸಿದ್ದರು. ಅವರು ಮುಂದುವರಿದು, ''ಅನೇಕ ವಿದೇಶೀಯರು ನಮ್ಮ ಮಠಕ್ಕೆ ಬರುವರು. ನಿನಗೆ ಪಾಂಡಿತ್ಯವಿಲ್ಲದಿದ್ದರೆ, ನೀನು ಹೇಗೆ ಅವರೊಡನೆ ಮಾತನಾಡುವೆ?'' ಎಂದು ಕೇಳಿದ್ದರು. ಅವರ ಪತ್ರ ನನಗೆ ತಲುಪಲು ಸ್ವಲ್ಪ ಸಮಯವಾಗಿತ್ತು, ಅಷ್ಟರಲ್ಲಿ ನನ್ನ ವೈರಾಗ್ಯದ ಕಾವು ನನ್ನನ್ನು ಸ್ವಲ್ಪ ಬಿಟ್ಟಿತ್ತು. ಆದ್ದರಿಂದ ನಾನು ಸಮ್ಮತಿಸಿದೆ. ನಂತರ ನನಗೆ ಅರ್ಥವಾಯಿತು, ಅವರು ಏನು ಬರೆದಿದ್ದರೂ ಅದು ಬಹು ಮೌಲ್ಯವುಳ್ಳದ್ದಾಗಿತ್ತು ಎಂದು: ಆಳವಾದ ಜ್ಞಾನ, ಪಾಂಡಿತ್ಯ, ತಿಳಿವಳಿಕೆ ಇಲ್ಲದ ಹೊರತು ಶ್ರೀರಾಮಕೃಷ್ಣರ ಮತ್ತು ಸ್ವಾಮಿ ವಿವೇಕಾನಂದರ ಸಂದೇಶವನ್ನು ಗ್ರಹಿಸಲಾರೆವು ಎಂಬುದು ಸಂಪೂರ್ಣ ನಿಜ. ಅಲ್ಲದೆ, ವೇದಾಂತವನ್ನು ಅರಸಿ ಬರುವ ವಿದೇಶೀ ಭಕ್ತರೊಡನೆ ನಾನು ಮಾತನಾಡಬೇಕಾಗುವುದು ಎಂದು ಅವರು ನುಡಿದಿದ್ದ ಭವಿಷ್ಯವೂ ನಿಜವಾಯಿತು. ನೋಡಿ, ನಾನಿಂದು ನಿಮ್ಮೊಡನೆ ಮಾತನಾಡುತ್ತಿರುವೆ; ನನಗೆ ವಿದ್ಯಾಭ್ಯಾಸವಿಲ್ಲದಿದ್ದರೆ ಇದನ್ನು ಹೇಗೆ ಮಾಡಲಾಗುತ್ತಿತ್ತು?

ಅನಂತರ ಸ್ವಾಮಿ ಪ್ರೇಮಾನಂದರು ನನ್ನ ವಿದ್ಯಾಭ್ಯಾಸದ ವಿಷಯವಾಗಿ ಮತ್ತಷ್ಟು ಬುದ್ಧಿವಾದ ಹೇಳಿದರು. ನನ್ನ ಕಾಲೇಜು ವಿದ್ಯಾಭ್ಯಾಸದ ಕೊನೆಯ ಎರಡು ವರ್ಷಗಳಿಗೆ ಬಂಗಾಲದ ಸಣ್ಣ ಒಂದು ಪಟ್ಟಣಕ್ಕೆ ಹೋಗಲು ನಾನು ತೀರ್ಮಾನಿಸಿದ್ದೆ, ಏಕೆಂದರೆ ಅಲ್ಲಿದ್ದ ಪ್ರಿನ್ಸಿಪಾಲರು ಜಗದ್ವಿಖ್ಯಾತ ಪಂಡಿತರಾಗಿದ್ದರು. ✷

*(ಮುಂದುವರಿಯುವುದು)*

**ಸ್ವಾಮಿ ನಿತ್ಯಸ್ಥಾನಂದ**

# ಭಕ್ತನ ಲಕ್ಷಣ




**ಭಾಗ – ೪**

**ಅನಪೇಕ್ಷ :** ಆಸೆಗೂ ಅಪೇಕ್ಷೆಗೂ ಏನು ವ್ಯತ್ಯಾಸ? ಆಸೆಯು ಸಾಮಾನ್ಯವಾದ ಮಾನಸಿಕ ಧರ್ಮ – ಸುಖವನ್ನು ಬಯಸುವ ಪ್ರವೃತ್ತಿ, ಅದು ಭೌತಿಕ ಅಥವಾ ಮಾನಸಿಕವಾಗಿರಬಹುದು, ಇಂದ್ರಿಯ ಸುಖದ ಆಸೆ ಇರಬಹುದು, ಕೀರ್ತಿಕಾಮನೆ ಇರಬಹುದು. ಅಪೇಕ್ಷೆಗೆ ಒಂದು ನಿರ್ದಿಷ್ಟ ವಿಷಯವಿರುತ್ತದೆ. ಒಂದು ನಿರ್ದಿಷ್ಟ ವ್ಯಕ್ತಿಯಿಂದಾಗಲಿ, ಕೆಲಸದಿಂದಾಗಲಿ, ಸನ್ನಿವೇಶದಿಂದಾಗಲಿ ನಿರ್ದಿಷ್ಟ ವಿಷಯವನ್ನು ನಿರೀಕ್ಷಿಸುವುದು. ಇಲ್ಲಿ ಸುಖದ ಬಯಕೆ ಇರಲೇಬೇಕೆಂದೇನಿಲ್ಲ. ಒಬ್ಬ ವ್ಯಕ್ತಿಯಿಂದಾಗಲಿ, ಸಂಸ್ಥೆಯಿಂದಾಗಲಿ ನಾನು ರಕ್ಷಣೆಯನ್ನು ಅಪೇಕ್ಷಿಸಬಹುದು. ಇನ್ನೊಬ್ಬರ ಮನೆಗೆ ಹೋದಾಗ ನಾನು ಆದರಾತಿಥ್ಯವನ್ನು ಅಪೇಕ್ಷಿಸಬಹುದು. ನನಗಾಗದ ಒಬ್ಬರಿಗೆ ಕೆಟ್ಟದ್ದಾಗಲಿ ಎಂದು ನಾನು ಅಪೇಕ್ಷಿಸಬಹುದು. ಯಾರಿಂದಾದರೂ ನಾನು ಸಾಂತ್ವನವನ್ನು ಅಪೇಕ್ಷಿಸಬಹುದು. ದೇವರಿಂದಲೂ ನಾವು ಅನೇಕ ವಿಷಯಗಳನ್ನು ಅಪೇಕ್ಷಿಸುತ್ತೇವೆ, ಅದಕ್ಕಾಗಿ ಪ್ರಾರ್ಥಿಸುತ್ತೇವೆ. ನಮ್ಮ ಪ್ರಾರ್ಥನೆ ಈಡೇರದೆ ಇರಬಹುದು. ಅಪೇಕ್ಷೆಯು ನಿರಾಸೆಗೆ ಕಾರಣವಾಗುತ್ತದೆ. ಒಬ್ಬ ವ್ಯಕ್ತಿಯು ಇದೇ ರೀತಿ ವರ್ತಿಸಬೇಕೆಂದು ನಾವು ಅಪೇಕ್ಷಿಸಿದಾಗ, ಅವನು ಆರೀತಿ ವರ್ತಿಸದಿದ್ದಾಗ ನಮಗೆ ತುಂಬ ನಿರಾಸೆ ಉಂಟಾಗುತ್ತದೆ, ಕೋಪವೂ ಬರುತ್ತದೆ. ಆ ರೀತಿ ಅಪೇಕ್ಷಿಸದೆ ಇದ್ದಾಗ, ಅವನು ನಮಗೆ ವಿರೋಧವಾಗಿ ವರ್ತಿಸಿದರೂ, ನಾವು ವಿಚಲಿತರಾಗದೇ ಇರಬಹುದು. ಅಪೇಕ್ಷಿಸಿದುದು ಆಗದೇ ಇದ್ದಾಗ ಎಷ್ಟು ನೋವಾಗುತ್ತದೊ ಅನಪೇಕ್ಷವಾಗಿ ಉಂಟಾಗುವ ಒಳಿತು ಅಷ್ಟೇ ಆನಂದವನ್ನು ನೀಡುತ್ತದೆ. ಆದರೆ ಭಕ್ತನು ನಿರ್ಲಿಪ್ತ ನಾಗಿರುತ್ತಾನೆ. ಅವನಿಗೆ ಅನಪೇಕ್ಷವಾಗಿ ಒಳಿತು ಕೆಡಕುಗಳೆರಡೂ ಉಂಟಾಗುತ್ತಿರಬಹುದು. ಅವನು ಎರಡನ್ನೂ ಸಮಾನವಾಗಿ ಸ್ವೀಕರಿಸುತ್ತಾನೆ – ಅವನು ಅಪೇಕ್ಷಿಸುವುದೂ ಇಲ್ಲ, ಉಪೇಕ್ಷಿಸುವುದೂ ಇಲ್ಲ.

ಅಪೇಕ್ಷೆಯ ಇನ್ನೊಂದು ಉತ್ತಮ ಮುಖವಿದೆ – ಇತರರ ಒಳಿತನ್ನು ಅಪೇಕ್ಷಿಸುವುದು – ಸರ್ವಭೂತಹಿತದಲ್ಲಿ ನಿರತನಾಗಿರುವುದು. ಅವನು ಪರಹಿತದಲ್ಲಿ ಸ್ವಹಿತವನ್ನು ಕಾಣುತ್ತಾನೆ. ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ :

ಯೇ ಕೇಚಿತ್ ದುಃಖಿತಾ ಲೋಕೇ ಸರ್ವೇ ತೇ ಸ್ವಸುಖೇಚ್ಛಯಾ ।
ಯೇ ಕೇಚಿತ್ ಸುಖಿತಾ ಲೋಕೇ ಸರ್ವೇ ತೇಽಸ್ವಸುಖೇಚ್ಛಯಾ ॥

ಈ ಪ್ರಪಂಚದಲ್ಲಿರುವ ದುಃಖಕ್ಕೆಲ್ಲ ಕಾರಣ ಸ್ವಸುಖಬಯಕೆ, ಹಾಗೂ ಈ ಪ್ರಪಂಚದಲ್ಲಿರುವ ಸುಖಕ್ಕೆಲ್ಲ ಕಾರಣ ಇತರರ ಸುಖವನ್ನು ಬಯಸುವುದು.

ನಾವೆಲ್ಲರೂ ಒಂದು ರೀತಿಯಲ್ಲಿ ಭಿಕ್ಷುಕರು. ನಾವು ಹಣ ಅಥವಾ ವಸ್ತುಗಳನ್ನು ಕೇಳದೇ ಇರಬಹುದು. ಆದರೆ ಪ್ರೀತಿ, ಸಹಾನುಭೂತಿ, ಪ್ರಶಂಸೆ, ಮಾನ್ಯತೆ ಇತ್ಯಾದಿಗಳನ್ನು ಬೇಡುತ್ತೇವೆ. 'ನನ್ನ ಕಡೆ ಸ್ವಲ್ಪ ಗಮನಿಸಿ, ಒಂದೆರಡು ಹೊಗಳಿಕೆಯ ಮಾತನ್ನಾಡಿ, ನನಗೆ ಸ್ವಲ್ಪ ಮಾನ್ಯತೆಯನ್ನು ನೀಡಿ, ಸ್ವಲ್ಪ ಪ್ರೀತಿಯ ಆಹಾರವನ್ನು ನೀಡಲಾರಿರಾ?' ಎಂಬಿತ್ಯಾದಿಯಾಗಿ ಬೇಡುವಂತಿರುತ್ತದೆ ನಮ್ಮ ಭಾವ. ಒಂದು ಉಪನ್ಯಾಸವನ್ನು ನೀಡಿದ ಮೇಲೆ – ಅದು ಒಳಿತಿರಲಿ, ಕೆಟ್ಟದ್ದಿರಲಿ – ಶ್ರೋತೃಗಳ ಹೊಗಳಿಕೆಯನ್ನು ನಾವು ಅತಿಯಾಗಿ ಬಯಸುತ್ತೇವೆ. ಯಾರೂ ಹೊಗಳದಿದ್ದರೆ ತೀರಾ ನಿರಾಸೆಯಾಗುತ್ತದೆ. ಕೆಲವರು ಜನರ ಗಮನವನ್ನು ಸೆಳೆಯುವುದಕ್ಕೆ ಏನೇನೋ ವಿಚಿತ್ರ ಕೃತ್ಯಗಳನ್ನು – ಕೆಲವೊಮ್ಮೆ ದುಷ್ಕೃತ್ಯಗಳನ್ನೂ – ಮಾಡುತ್ತಾರೆ. ಯಾವುದಾದರೂ ರೀತಿಯಲ್ಲಿ ಪ್ರಸಿದ್ಧಿಯನ್ನು ಪಡೆಯಬೇಕು ('ಯೇನ ಕೇನ ಪ್ರಕಾರೇಣ ಪ್ರಸಿದ್ಧಪುರುಷೋ ಭವ') ಎಂಬುದು ಅವರ ಧೋರಣೆ. ಆದರೆ ಭಕ್ತನ ಧೋರಣೆ, ಯಾವುದಾದರೂ ರೀತಿಯಲ್ಲಿ ಭಗವಂತನ ಪ್ರೀತಿಗೆ ಒಳಗಾಗಬೇಕು ಎಂಬುದು. ಭಗವದ್ಭಾವದಲ್ಲಿ ಅವನು ಎಷ್ಟೊಂದು ಆಂತರಿಕ ಸುಖವನ್ನು ಪಡೆಯುತ್ತಿರುತ್ತಾನೆಂದರೆ, ಯಾರಿಂದಲೂ ಯಾವುದರಿಂದಲೂ ಏನನ್ನೂ ಅಪೇಕ್ಷಿಸುವ ಸಾಧ್ಯತೆಯೇ ಇರುವುದಿಲ್ಲ.

**ಶುಚಿ :** ಭಕ್ತನು ಶುಚಿಯಾಗಿರುತ್ತಾನೆ. ಅಂದರೆ ಅವನು ಮಡಿವಂತನೆಂದಲ್ಲ. ಮಡಿವಂತರ ಸ್ವಭಾವ ಹೀಗಿರುತ್ತದೆ : ಸ್ನಾನ ಮಾಡಬೇಕು, ದೇಹದ ಕೊಳೆ ಹಾಗೆಯೇ ಇದ್ದರೂ ಪರವಾಗಿಲ್ಲ; ಅದು ಎಷ್ಟೇ ಕೊಳೆಯಾಗಿದ್ದರೂ ಮಡಿಬಟ್ಟೆ ಉಟ್ಟುಕೊಳ್ಳಬೇಕು; ಕೆಲವನ್ನು ಕೆಲವರನ್ನು ಮುಟ್ಟಬಾರದು, ಬೇರೆ ಏನೇ ಕೊಳಕು ಪದಾರ್ಥವನ್ನು ಮುಟ್ಟಿದರೂ ಪರವಾಗಿಲ್ಲ; ಆಹಾರದ ಮೇಲೆ ಎಷ್ಟೇ ನೊಣಗಳು ಕುಳಿತಿರಬಹುದು, ಆದರೆ ಕೆಳವರ್ಗದ ಜನರು ಅದನ್ನು ಮುಟ್ಟಲೇಬಾರದು; ನೀರು ಮಲಿನವಾಗುವುದು ಕೆಲವು ವರ್ಗದ ಜನರು ಅದನ್ನು ಮುಟ್ಟುವುದರಿಂದ, ಅದರಲ್ಲಿರುವ ಕೊಳೆಯಿಂದಲ್ಲ – ಹೀಗೆ ಮಡಿವಂತಿಕೆಯ ಹಲವು ರೂಪಗಳಿವೆ. ಆದರೆ ಭಕ್ತನು, ಯಾವುದೇ ಸ್ಥಿತಿಯಲ್ಲಿರಲಿ, ಸದಾ ಶುಚಿ. ಏಕೆಂದರೆ ಅವನು ಯಾವಾಗಲೂ ಪವಿತ್ರ ಭಗವತ್ಸಾನ್ನಿಧ್ಯದಲ್ಲಿರುತ್ತಾನೆ.

ಛಾಂದೋಗ್ಯ ಉಪನಿಷತ್ತಿನ ಈ ಮಂತ್ರವು ತುಂಬ ಪ್ರಸಿದ್ಧವಾದುದು, ಸ್ವಾಮಿ ವಿವೇಕಾನಂದರು ಇದನ್ನು ಹಲವು ಕಡೆ ಉದಾಹರಿಸುತ್ತಾರೆ : **ಆಹಾರಶುದ್ಧೌ ಸತ್ತ್ವಶುದ್ಧಿಃ, ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ, ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ।** – ಆಹಾರ

ಶುದ್ಧಿಯಿಂದ ಮನಸ್ಸು ಶುದ್ಧಿಯಾಗುತ್ತದೆ, ಮನಶ್ಶುದ್ಧಿಯಿಂದ ಆತ್ಮ ಸ್ಮರಣೆ ಸ್ಥಿರವಾಗುತ್ತದೆ ಮತ್ತು ಇದರಿಂದ ಎಲ್ಲ ಬಂಧನಗಳೂ ಕಳಚಿ ಹೋಗುತ್ತವೆ. ನಾವು ಉಣ್ಣುವ ಆಹಾರ ಮುಖ್ಯವಾದರೂ, ಇಂದ್ರಿಯಗಳ ಮೂಲಕ ಸ್ವೀಕರಿಸುವ ಎಲ್ಲ ವಿಷಯಗಳೂ ಆಹಾರವೇ – ಎಂಬುದು ಶ್ರೀಶಂಕರಾಚಾರ್ಯರ ಅಭಿಪ್ರಾಯ. ಸ್ವಾಮಿ ವಿವೇಕಾನಂದರೂ ಇದನ್ನೇ ಸಮರ್ಥಿಸುತ್ತಾರೆ. ಮುಖ್ಯವಾಗಿ ಮೂರು ಬಗೆಯ ಆಹಾರಗಳಿವೆ ಎಂದು ಪಿ.ಡಿ. ಔಸ್ಪಂಸ್ಕಿ ಅಭಿಪ್ರಾಯಪಡುತ್ತಾರೆ : ಬಾಯಿಯ ಮೂಲಕ ಸ್ವೀಕರಿಸುವ ಆಹಾರ, ನಾವು ಉಸಿರಾಡುವ ಗಾಳಿ ಮತ್ತು ಇಂದ್ರಿಯ ಸಂವೇದನೆಗಳು. ಈ ಮೂರೂ ಶುದ್ಧವಾಗಿರಬೇಕು, ಆಗ ಅಂತಃಶುದ್ಧಿಯಾಗುತ್ತದೆ. ಸ್ವಾಮಿ ಯತೀಶ್ವರಾನಂದರು ಹೇಳುತ್ತಾರೆ: ''ಯಾವಾಗಲೂ ಸಾಧ್ಯವಾದಷ್ಟೂ ಎಚ್ಚರದಿಂದಿರಿ, ಪೂರ್ಣಪ್ರಜ್ಞೆಯಿಂದಿರಿ. ಯಾವುದೇ ಇಂದ್ರಿಯಗಳ ಮೂಲಕವು ಯಾವುದೇ ಅನಿಷ್ಟ ಸಂಸ್ಕಾರಗಳು ಉಂಟಾಗದಂತೆ ನೋಡಿಕೊಳ್ಳಿ. ಅವು ಒಳಗೆ ಬೇರುಬಿಟ್ಟರೆ, ಕೂಡಲೇ ಕಿತ್ತುಹಾಕಿ. ಈ ವಿಷಯದಲ್ಲಿ ನಿಮ್ಮ ವಿವೇಕಶಕ್ತಿ ಸದಾ ಜಾಗ್ರತವಾಗಿರಲಿ.'' *(ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ, ಪು.೧೫೨)*

ಇನ್ನೊಂದು ಅರ್ಥದಲ್ಲಿ ಶೌಚವೆಂದರೆ ನೈತಿಕ ಶುದ್ಧಿ – ನೈತಿಕವಾಗಿ ಶುದ್ಧ ಜೀವನವನ್ನು ನಡೆಸುವುದು. ಈ ಕೆಳಗಿನ ಸುಭಾಷಿತವು ತುಂಬ ಅರ್ಥಪೂರ್ಣವಾದುದು:

**ಸರ್ವೇಷಾಮಪಿ ಶೌಚಾನಾಮರ್ಥಶೌಚಂ ಪರಂ ಸ್ಮೃತಮ್ ।**
**ಯೋ ಅರ್ಥಶುಚಿಃ ಸ ಶುಚಿಃ ನ ಮೃದ್ವಾರಿ ಶುಚಿಃ ಶುಚಿಃ ॥**

''ಎಲ್ಲ ಶೌಚಗಳಲ್ಲಿಯೂ ಅರ್ಥಶೌಚವೇ ಅತ್ಯಂತ ಶ್ರೇಷ್ಠವಾದುದು. ಯಾರು ಅರ್ಥಶುಚಿಯೋ ಅವನೇ ನಿಜವಾಗಿಯೂ ಶುಚಿ, ಮಣ್ಣು ನೀರಿನಿಂದ ಶುಚಿಗೊಂಡವನು ಶುಚಿಯೇ ಅಲ್ಲ.'' ಅರ್ಥಶೌಚವೆಂದರೆ ಸತ್ಯನಿಷ್ಠೆಯಿಂದ, ಪ್ರಾಮಾಣಿಕವಾಗಿ, ಇತರರನ್ನು ವಂಚಿಸದೆ, ನೋಯಿಸದೆ ಹಣ ಗಳಿಸುವುದು. ಆದ್ದರಿಂದ ಐದು ಬಗೆಯ ಶೌಚಗಳನ್ನು ಹೇಳಲಾಗಿದೆ:

**ಸತ್ಯಶೌಚಂ ಮನಃಶೌಚಂ ಶೌಚಮಿಂದ್ರಿಯನಿಗ್ರಹಃ ।**
**ಸರ್ವಭೂತದಯಾ ಶೌಚಂ ಜಲಶೌಚಂ ತು ಪಂಚಮಮ್ ॥**

''ಸತ್ಯನುಡಿ, ಮನಃಶುದ್ಧಿ, ಇಂದ್ರಿಯನಿಗ್ರಹ ಮತ್ತು ಪ್ರಾಣಿದಯೆ ಇವು ನಾಲ್ಕು ಉತ್ತಮ ಶೌಚಗಳು. ಜಲಶೌಚವು ಅತ್ಯಂತ ಕೆಳಗಿನದಾದ ಐದನೆಯದು.''

ಮಹಾಭಾರತವು ಸುಂದರ ಉಪಮೆಯ ಮೂಲಕ ಅಂತರಂಗ ಶುದ್ಧಿಯ ಬಗ್ಗೆ ಹೀಗೆ ಹೇಳುತ್ತದೆ:

**ಆತ್ಮಾನದೀ ಸಂಯಮತೋಯಪೂರ್ಣಾ**
**ಸತ್ಯಾವಹಾ ಶೀಲತಟಾ ದಯೋರ್ಮಿಃ ।**
**ತತ್ರಾವಗಾಹಂ ಕುರು ಪಾಂಡುಪುತ್ರ**
**ನ ವಾರಿಣಾ ಶುದ್ಧ್ಯತಿ ಚಾಂತರಾತ್ಮಾ ॥**

''ಈ ವ್ಯಕ್ತಿತ್ವವೇ ಒಂದು ನದಿ. ಸಂಯಮವೇ ಅದರ ನೀರು. ಸತ್ಯವೇ ಅದರ ಹರಿಯುವಿಕೆ. ಶೀಲವು ಅದರ ಎರಡು ದಡ. ದಯೆಯೇ ಅಲೆ. ಹೇ ಪಾಂಡುಪುತ್ರ, ಆ ನದಿಯಲ್ಲಿ ನೀನು ಮುಳುಗುಹಾಕು. ನೀರಿನಿಂದ ಅಂತರಾತ್ಮವು ಶುದ್ಧವಾಗುವುದಿಲ್ಲ.''

ಶ್ರೀರಾಮಕೃಷ್ಣರು ಹೇಳುತ್ತಾರೆ: ಸಾಧುವಿನ ಕಮಂಡಲು ಎಲ್ಲ ತೀರ್ಥಸ್ಥಳಗಳಿಗೆ ಹೋಗಿಬಂದರೂ ತನ್ನ ಕಹಿ ಸ್ವಭಾವವನ್ನು ಅದು ಬಿಡುವುದಿಲ್ಲ. ಪುರಂದರದಾಸರು ಹಾಡುತ್ತಾರೆ: ''ಮಿಂದಲ್ಲಿ ಫಲವೇನು ಮೀನುಮೊಸಳೆಯಂತೆ, ನಿಂದಲ್ಲಿ ಫಲವೇನು ಶ್ರೀಶೈಲ ಕಾಗೆಯಂತೆ. ಹೊರಗೆ ಮಿಂದು ಒಳಗೆ ಮೀಯದವರ ಕಂಡು ಬೆರಗಾಗಿ ನಗುತಿದ್ದ ಪುರಂದರ ವಿಠಲ.'' '*ಭಕ್ತಿ ಸೌರಭ*' ದಲ್ಲಿ ಒಂದು ಮಾತು ಬರುತ್ತದೆ: ''ಸರ್ಪವು ಪದೇಪದೇ ಪೊರೆ ಬಿಡುತ್ತದೆ, ಆದರೆ ಅದು ತನ್ನೊಳಗಿನ ವಿಷವನ್ನು ಮಾತ್ರ ಬಿಡುವುದಿಲ್ಲ.

**ದಕ್ಷ:** ಭಕ್ತನು ದಕ್ಷನಾಗಿರುತ್ತಾನೆ. ಅವನು ದಕ್ಷ ಆಡಳಿತಗಾರ – ಹೊರಪ್ರಪಂಚದಲ್ಲಲ್ಲ, ಒಳಪ್ರಪಂಚದಲ್ಲಿ. ಅಂತರಂಗದ ಶಕ್ತಿಗಳನ್ನು ಸರಿಯಾಗಿ ನಿರ್ವಹಿಸುವುದರಲ್ಲಿ ಅವನು ದಕ್ಷನು. ಏಕೆಂದರೆ ಅವನು ಇಂದ್ರಿಯ ಮನಸ್ಸು ಆಸೆ ಮುಂತಾದವುಗಳಿಗೆ ದಾಸನಾಗಿರುವುದಿಲ್ಲ. ವ್ಯಕ್ತಿತ್ವದ ಎಲ್ಲ ಅಂಶಗಳೂ ಅವನ ನಿಗ್ರಹದಲ್ಲಿರುತ್ತವೆ. ಸರ್ವಶಕ್ತನಾದ ಭಗವಂತನ ದಾಸನಿಗೆ ಬೇರಿನ್ನಾವ ದಾಸ್ಯವೂ ಇರುವುದಿಲ್ಲ. ಸಾಮಾನ್ಯವಾಗಿ ನಾವು ಸಮಾಜದಲ್ಲಿ ನೋಡುವಂತೆ ಒಬ್ಬ ಯಜಮಾನನಿಗೆ ದಾಸನಾಗಿರುವವನು ತನ್ನ ಕೆಳಗಿನವರ ಮೇಲೆ ಪೂರ್ಣ ಪ್ರಭುತ್ವವನ್ನು ಪಡೆಯಬಯಸುತ್ತಾನೆ. ಆದರೆ ಭಕ್ತನು ಪ್ರಭುತ್ವದ ಅಹಂ ಇಲ್ಲದೆ ತನ್ನೊಳಗೆ ಪ್ರಭುತ್ವವನ್ನು ಸಾಧಿಸುತ್ತಾನೆ ಮತ್ತು ಹೊರಗೆ ದಾಸ್ಯ ಮನೋಭಾವವಿಲ್ಲದೆ ನಮ್ರಭಾವದಿಂದಿರುತ್ತಾನೆ. ಆದರೆ ಶ್ರೀರಾಮಕೃಷ್ಣರು ಹೇಳುವಂತೆ, ಭಕ್ತನಾದರೂ ಮೂರ್ಖನಾಗಿರುವುದಿಲ್ಲ. ಒಬ್ಬ ಶ್ರೀಮಂತನಿದ್ದ, ಅವನಿಗೊಬ್ಬ ಆಳು – ಅತ್ಯಂತ ವಿಧೇಯ, ಹೇಳಿದಷ್ಟೇ ಹೇಳಿದಂತೆಯೇ ಮಾಡುತ್ತಿದ್ದ. ಒಮ್ಮೆ ಶ್ರೀಮಂತನು ಬಿಸ್ಕೆಟ್ ತೆಗೆದುಕೊಂಡು ಬಾ ಎಂದು ಆಳಿಗೆ ಹೇಳಿದ. ಆಳು ಅದನ್ನು ಕೈಯಲ್ಲಿ ತೆಗೆದುಕೊಂಡು ಬಂದು ಕೊಟ್ಟ. ಶ್ರೀಮಂತ ಕೋಪದಿಂದ, ''ಮೂರ್ಖ, ಬಿಸ್ಕೆಟನ್ನು ಹಾಗೇನೊ ತರೋದು? ತಟ್ಟೇಲಿ ತಗೊಂಡು ಬರಬೇಕೂಂತ ಗೊತ್ತಿಲ್ಲವೇನೊ? ಇನ್ನು ಮೇಲೆ ನಾನೇನಾದರೂ ಹೀಗೆ ಕೇಳಿದರೆ ತಟ್ಟೇಲಿ ತಗೊಂಡುಬರಬೇಕು, ತಿಳೀತೆ?'' ''ಆಗಲಿ, ಸಾರ್'' ಎಂದು ತಲೆಬಾಗಿ ಆಳು ಹೊರಟುಹೋದ. ಕೆಲವು ದಿನಗಳ ನಂತರ ''ನನ್ನ ಚಪ್ಪಲಿ ತಗೊಂಡು ಬಾ'' ಎಂದು ಶ್ರೀಮಂತನ ಅಪ್ಪಣೆಯಾಯಿತು. ಆಳು ಬೆಳ್ಳಿಯ ತಟ್ಟೆಯಲ್ಲಿ ಚಪ್ಪಲಿಯನ್ನು ತೆಗೆದುಕೊಂಡು ಬಂದ. ಭಕ್ತನಲ್ಲಿ ಇಂತಹ ಮೂರ್ಖತನ ಇರುವುದಿಲ್ಲ.

ಅವನು ಹೊರಗಿನ ಕಾರ್ಯನಿರ್ವಹಣೆಯಲ್ಲಿಯೂ ದಕ್ಷನಾಗಿರುತ್ತಾನೆ. ಅವನು ಮೃದುವಾದರೂ ದಕ್ಷನಾಗಿರುತ್ತಾನೆ. ಮೊಳಕೆ

ಮೃದುವಾದರೂ ಮಣ್ಣನ್ನು ಭೇದಿಸಿಕೊಂಡು ಹೊರಬರುತ್ತದೆ. ನಾಲಗೆ ಮೃದುವಾದರೂ, ಹಲ್ಲಿನಿಂದ ಕಚ್ಚಿಸಿಕೊಂಡರೂ, ಹಲ್ಲಿನ ಸೇವೆಯನ್ನು ಮಾಡುತ್ತದೆ. ಮತ್ತೆ ಅದಕ್ಕೆ ಆಯುಸ್ಸು ಜಾಸ್ತಿ – ಹುಟ್ಟಿನಿಂದ ಸಾಯುವವರೆಗೂ ಇರುತ್ತದೆ. ಕಠಿಣವಾದ ಹಲ್ಲು ತಡವಾಗಿ ಹುಟ್ಟಿ ಬೇಗ ಉದುರಿಹೋಗುತ್ತದೆ. ತುಲಸೀದಾಸರು ಭಕ್ತನನ್ನು ನಾಲಗೆಗೆ ಹೋಲಿಸುತ್ತಾರಂತೆ. ನಾಲಗೆ ಮೃದುವಾಗಿರುತ್ತದೆ, ಅದಕ್ಕೆ ಸಂಗ್ರಹಬುದ್ಧಿ ಇಲ್ಲ. ಅದು ಏನನ್ನೂ ಇಟ್ಟುಕೊಳ್ಳುವುದಿಲ್ಲ, ಹಿಡಿದು ಕೊಳ್ಳುವುದೂ ಇಲ್ಲ. ಒಳಗೆ ತೆಗೆದುಕೊಳ್ಳುವ ಇಲ್ಲವೆ ಹೊರಗೆ ಹಾಕುವುದಷ್ಟೇ ಅದರ ಕೆಲಸ. ಎಲ್ಲವನ್ನೂ ಚಿಂದಿಚಿಂದಿ ಮಾಡುವ, ನುಗ್ಗು ನುರಿ ಮಾಡುವ ಬಲಿಷ್ಠ ಹಲ್ಲುಗಳ ಮಧ್ಯೆ ಜೀವಮಾನವೆಲ್ಲ ಕಳೆದರೂ ನಾಲಗೆ ಅಪಾಯಕ್ಕೆ ಒಳಗಾಗದು. ಕೆಲವೊಮ್ಮೆ ಹಲ್ಲುಗಳಿಂದ ನೋವು ತಿಂದರೂ ಅದು ಪ್ರತೀಕಾರ ಮಾಡದು. ಅದಕ್ಕೆ ಬದಲಾಗಿ ಬಲಿಷ್ಠ ಹಲ್ಲುಗಳಿಗೆ ಏನಾದರೂ ಸಿಕ್ಕಿಹಾಕಿಕೊಂಡು ಬಾಧೆ ಕೊಡುತ್ತಿದ್ದರೆ ಈ ಕೋಮಲ ನಾಲಗೆ ಸೂಕ್ತವಾಗಿ, ಮೆಲ್ಲಗೆ, ಆ ಬಾಧೆಯನ್ನು ನಿವಾರಿಸುವ ಸೇವೆ ಮಾಡುತ್ತದೆ. ಉಳಿದ ಇಂದ್ರಿಯಗಳು ನಿರ್ವಹಿಸುವುದು ಒಂದು ಕೆಲಸವನ್ನು ಮಾತ್ರ. ಕಿವಿಗೆ ಕೇಳುವ ಕೆಲಸ ಒಂದೇ, ಕಣ್ಣಿಗೆ ನೋಡುವ ಕೆಲಸ ಮಾತ್ರ. ಆದರೆ ನಾಲಗೆ ಎರಡು ಕೆಲಸಗಳನ್ನು – ತಿಂದ ಆಹಾರದ ರುಚಿಯನ್ನು ತಿಳಿಸುವ ಮತ್ತು ಮಾತನಾಡುವ ಕೆಲಸ – ಸಮರ್ಥವಾಗಿ ನಿರ್ವಹಿಸುತ್ತದೆ. ಭಕ್ತನು ಇಂತಹ ಗುಣಗಳಿಂದ ಕೂಡಿದವನಾಗಿರುತ್ತಾನೆ. *(ಭಕ್ತಿ ಸೌರಭ, ಪು.೭೮ – ೭೯)*

**ಉದಾಸೀನ:** ಭಕ್ತನು ಉದಾಸೀನನಾಗಿರುತ್ತಾನೆ. ಉದಾಸೀನತೆ ಸೋಮಾರಿತನವಲ್ಲ, ನಿರುತ್ಸಾಹವೂ ಅಲ್ಲ ಮತ್ತು ಉಪೇಕ್ಷೆಯೂ ಅಲ್ಲ. ಸೋಮಾರಿಗಳು ಮೇಲ್ನೋಟಕ್ಕೆ ಉದಾಸೀನರಾಗಿ ಕಾಣುತ್ತಾರೆ. ಆದರೆ ಒಳಗಡೆ ಹಲವು ಆಸಕ್ತಿಗಳು ಮನೆಮಾಡಿಕೊಂಡಿರುತ್ತವೆ. ಇತರರು ತಂದು ಒದಗಿಸಿದರೆ ಎಲ್ಲ ಸುಖವೂ ಅವರಿಗೆ ಬೇಕು. ತಾವೇ ಅಡಿಗೆ ಮಾಡುವುದಕ್ಕೆ ಉದಾಸೀನತೆ, ಬೇರೆಯವರು ಮಾಡಿ ಬಡಿಸಿದರೆ ಚೆನ್ನಾಗಿ ಉಣ್ಣುತ್ತಾರೆ. ಹಾಗೆಯೇ ಉಪೇಕ್ಷೆಯೂ ಒಳ್ಳೆಯದಲ್ಲ. ವಿಶೇಷವಾಗಿ ಇತರರನ್ನು ಉಪೇಕ್ಷಿಸುವುದು ನಾವು ಅವರಿಗೆ ಮಾಡಬಹುದಾದ ದೊಡ್ಡ ಹಿಂಸೆ. ದ್ವೇಷಿಸುವುದಕ್ಕಿಂತ ಉಪೇಕ್ಷಿಸುವುದು ಕೆಟ್ಟದ್ದು. ದ್ವೇಷಿಸುವಾಗ ವ್ಯಕ್ತಿಗೆ ನಾವು ಪ್ರಾಧಾನ್ಯ ನೀಡುತ್ತೇವೆ, ಆದರೆ ಉಪೇಕ್ಷಿಸುವುದೆಂದರೆ ವ್ಯಕ್ತಿಯನ್ನು ಕಡೆಗಣಿಸುತ್ತೇವೆ, ಅವನ ಇರುವಿಕೆಯನ್ನೇ ನಾವು ಗುರುತಿಸುವುದಿಲ್ಲ. ನಾವು ಅನೇಕ ಬಾರಿ ವಸ್ತುಗಳನ್ನು ಉಪೇಕ್ಷಿಸುವುದಕ್ಕಿಂತ ಹೆಚ್ಚಾಗಿ ವ್ಯಕ್ತಿಗಳನ್ನು ಉಪೇಕ್ಷಿಸುತ್ತೇವೆ. ಆದರೆ ಭಕ್ತನು ಎಲ್ಲರನ್ನೂ ಗೌರವಿಸುತ್ತಾನೆ, ಎಲ್ಲವನ್ನೂ ಪರಿಗಣಿಸುತ್ತಾನೆ.

ಉತ್ ಎಂದರೆ ಉನ್ನತ ಸ್ತರದಲ್ಲಿ, ಆಸೀನ ಎಂದರೆ ಇರುವವನು. ಭಕ್ತನು ಭಗವದ್ಭಾವದ ಉನ್ನತ ಸ್ತರದಲ್ಲಿರುವುದರಿಂದ ಅವನು ಎಲ್ಲ ವಿಷಯದಲ್ಲಿಯೂ ನಿರ್ಲಿಪ್ತ ಭಾವದಿಂದ ಇರುತ್ತಾನೆ. ಸಾಮಾನ್ಯ ವಿಷಯಗಳಾವುವೂ ಅವನನ್ನು ತಾಕುವುದೇ ಇಲ್ಲ. ಮಿಥಿಲಾ ನಗರವು ಉರಿಯುತ್ತಿದ್ದರೂ ಜನಕನು ಸ್ವಲ್ಪವೂ ವಿಚಲಿತನಾಗಲಿಲ್ಲ. ರೋಮ್ ನಗರವು ಸುಟ್ಟುಹೋಗುತ್ತಿದ್ದಾಗ ನೀರೊ ಪಿಟೀಲು ಬಾರಿಸುತ್ತಿದ್ದ ಎಂದು ಹೇಳುತ್ತಾರೆ. ಇಲ್ಲಿ ನೀರೊಗೆ ಜನರ ದುಃಖದ ಬಗ್ಗೆ ಸ್ವಲ್ಪವೂ ಕಳಕಳಿ ಇಲ್ಲ, ತನ್ನ ಸುಖದಲ್ಲೇ ಆತ ಮತ್ತನಾಗಿದ್ದ. ಇದು ಉದಾಸೀನತೆಯಲ್ಲ. ಮಿಥಿಲಾ ನಗರವು ಭಸ್ಮವಾಗುವುದೆಂದರೆ ಅಪಾರ ಹಾನಿ, ಆ ಹಾನಿಯ ವಿಷಯದಲ್ಲಿ ಜನಕನು ಉದಾಸೀನನಾಗಿದ್ದ, ಜನರ ಬಗ್ಗೆ ಕಳಕಳಿ ಇರಲಿಲ್ಲವೆಂದಲ್ಲ. ಒಬ್ಬ ಆಗರ್ಭ ಶ್ರೀಮಂತನಿದ್ದ. ಅವನು ಅಪಾರ ಹಣವನ್ನು ಒಂದು ಬ್ಯಾಂಕಿನಲ್ಲಿ ಜಮಾಯಿಸಿದ್ದ. ಆ ಬ್ಯಾಂಕು ದಿವಾಳಿಯಾಗಿ ಎಲ್ಲ ಹಣ ನಷ್ಟವಾಯಿತು. ಈ ಸುದ್ದಿಯನ್ನು ಅವನಿಗೆ ತಿಳಿಸಿದಾಗ ಅವನೆಂದ, ''ಪರವಾಗಿಲ್ಲ, ನಾನೇನೂ ಆ ಹಣವನ್ನು ಉಪಯೋಗಿಸುತ್ತಿರಲಿಲ್ಲವಲ್ಲ!'' ಇದು ಉದಾಸೀನತೆ.

ಉದಾಸೀನತೆಯೆಂದರೆ ಕೇವಲ ಸಾಕ್ಷೀಭಾವದಲ್ಲಿರುವುದು – ನಿರಪೇಕ್ಷದೃಷ್ಟಿಯಿಂದ, ತಾದಾತ್ಮ್ಯವಿಲ್ಲದೆ ಎಲ್ಲ ವಿಷಯಗಳನ್ನೂ ನೋಡುವುದು. ಮನಸ್ಸಿನಲ್ಲೇಳುವ ವಿವಿಧ ಆಲೋಚನೆ ಭಾವಗಳ ವಿಷಯಗಳನ್ನೂ ಸಾಕ್ಷಿಯಂತೆ ನೋಡುವುದು. ಕೆಲವೊಮ್ಮೆ ಕೆಟ್ಟ ಆಲೋಚನೆಗಳು ಬಂದಾಗ ಅವುಗಳು ತುಂಬ ಕೆಟ್ಟದ್ದೆಂದು ಮನಸ್ಸಿನಲ್ಲೇ ಶಪಿಸುತ್ತ ಅವುಗಳನ್ನು ದ್ವೇಷಿಸುತ್ತೇವೆ. ಈ ರೀತಿ ದ್ವೇಷಿಸಿದರೂ ಅವುಗಳಿಗೆ ಪ್ರಾಧಾನ್ಯ ನೀಡಿದಂತಾಗುತ್ತದೆ. ಉದಾಸೀನ ಭಾವದಿಂದಿದ್ದರೆ ಅವುಗಳು ಬಂದಂತೆಯೇ ಹೊರಟುಹೋಗುತ್ತವೆ. ಮನೆಗೆ ಅತಿಥಿಗಳು ಬಂದಾಗ ಅವರನ್ನು ತುಂಬ ಉಪಚರಿಸಿದರೆ ಅವರು ತಂಗಿಬಿಡುತ್ತಾರೆ, ಸುಲಭವಾಗಿ ಹೋಗುವುದಿಲ್ಲ. ರೈಲ್ವೆ ಪ್ಲಾಟ್‌ಫಾರ್ಮ್ ಬಂದುಹೋಗುವ ನೂರಾರು ರೈಲುಗಳಿಗೆ ಸಾಕ್ಷಿಯಾಗಿ ಸ್ಥಿರವಾಗಿ ನಿಂತಿರುತ್ತದೆ.

ಶ್ರೀರಾಮಕೃಷ್ಣರ ಶ್ರೇಷ್ಠ ಶಿಷ್ಯರಾದ ಸ್ವಾಮಿ ಬ್ರಹ್ಮಾನಂದರು ತಮ್ಮ ಪರಿವ್ರಾಜಕ ದಿನಗಳಲ್ಲಿ ಒಮ್ಮೆ ಒಂದು ತೀರ್ಥಸ್ಥಳದಲ್ಲಿ ಧ್ಯಾನಕ್ಕೆ ಕುಳಿತಿದ್ದರು. ಆಗ ತುಂಬ ಚಳಿ. ಅವರು ಸಾಮಾನ್ಯ ಉಡುಪಿನಲ್ಲಿದ್ದರು. ಭಕ್ತನೊಬ್ಬನು ಶ್ರದ್ಧೆಯಿಂದ ಒಂದು ಕಂಬಳಿಯನ್ನು ತಂದು ಅವರ ಮುಂದೆ ಇಟ್ಟನು. ಸ್ವಾಮಿಗಳು ಗಮನಿಸಿದರೂ ಉದಾಸೀನ ಭಾವದಿಂದಿದ್ದರು. ಸ್ವಲ್ಪ ಸಮಯದ ನಂತರ ಕಳ್ಳನೊಬ್ಬನು ಬಂದು ಆ ಹೊಸ ಕಂಬಳಿಯನ್ನು ಎತ್ತಿಕೊಂಡು ಹೋದನು. ಅದನ್ನೂ ಗಮನಿಸಿದ ಬ್ರಹ್ಮಾನಂದರು ಮುಗುಳ್ನಕ್ಕರು.

ಈ ಪ್ರಪಂಚದಲ್ಲಿ ಕೆಲವರು ಹೊಗಳುತ್ತಾರೆ, ಕೆಲವರು ತೆಗಳುತ್ತಾರೆ, ಕೆಲವರು ಹಾರ ಹಾಕುತ್ತಾರೆ, ಕೆಲವರು ಒದೆಯುತ್ತಾರೆ. ನಾವು ಹಸುವನ್ನು ಒಮ್ಮೆ ಪೂಜಿಸುತ್ತೇವೆ, ಒಮ್ಮೆ ಹೊಡೆಯುತ್ತೇವೆ. ಈ ಪ್ರಪಂಚವೇ ಹೀಗೆ. ಭಕ್ತನು ಈ ಎಲ್ಲ ವಿಷಯಗಳಲ್ಲಿ ಉದಾಸೀನನಾಗಿರುತ್ತಾನೆ. ಅವನು 'ತುಲ್ಯನಿಂದಾಸ್ತುತಿ' ಯಾಗಿರುತ್ತಾನೆ.

ಅವನ ಧೋರಣೆ ಎಂತಹದಿರುತ್ತೆಂಬುದನ್ನು *ಜೀವನ್ಮುಕ್ತಿವಿವೇಕ* ದ ಈ ಕೆಳಗಿನ ಶ್ಲೋಕವು ಪ್ರತಿಬಿಂಬಿಸುತ್ತದೆ:

**ಶರೀರಂ ಯದಿ ನಿಂದಂತಿ ಸಹಾಯಾಸ್ತೇ ಜನಾ ಮಮ ।**
**ಆತ್ಮಾನಂ ಯದಿ ನಿಂದಂತಿ ಸ್ವಾತ್ಮಾನಂ ಸ್ವಯಮೇವ ಹಿ ॥**

''ಜನರು ನನ್ನ ಶರೀರವನ್ನು ನಿಂದಿಸುವುದಾದರೆ ಅವರು ನನಗೆ ಸಹಾಯವನ್ನೇ ಮಾಡಿದಂತಾಗುತ್ತದೆ. ಏಕೆಂದರೆ ರಕ್ತಮಾಂಸಾದಿಗಳಿಂದ ಕೂಡಿದ ಈ ಕ್ಷುದ್ರ ದೇಹವು ನಿಂದಾರ್ಹವೇ. ಒಂದು ವೇಳೆ ಅವರು ಆತ್ಮನನ್ನು ನಿಂದಿಸುವುದಾದರೆ, ಅವರೂ ಆತ್ಮಸ್ವರೂಪರೇ ಆದುದರಿಂದ, ತಮ್ಮನ್ನೇ ನಿಂದಿಸಿಕೊಂಡಂತಾಗುತ್ತದೆ.''

ಬುದ್ಧನಿಗೆ ಪೂರ್ಣ ಎಂಬ ಶಿಷ್ಯನಿದ್ದನು. ಶ್ರೋಣಪ್ರಾಂತದಲ್ಲಿರುವ ಕಾಡು ಜನರಿಗೆ ಬುದ್ಧನ ಸಂದೇಶವನ್ನು ತಿಳಿಸಬೇಕೆಂದು ಅವನಿಗೆ ಪ್ರೇರಣೆಯಾಯಿತು. ಬುದ್ಧನ ಆಶೀರ್ವಾದವನ್ನು ಪಡೆಯಲು ಹೋದನು. ಪೂರ್ಣನ ಯೋಜನೆಯನ್ನು ತಿಳಿದು ಬುದ್ಧ ಕೇಳಿದ : ''ಪೂರ್ಣ, ನಿನಗೆ ಗೊತ್ತು, ಶ್ರೋಣ ಪ್ರಾಂತದ ಜನರು ತುಂಬ ಕ್ರೂರಿಗಳೆಂದು. ಅವರು ನಿನ್ನನ್ನು ಬೈದು ಅವಮಾನಗೊಳಿಸಿದರೆ ಏನು ಮಾಡುವೆ?'' ಪೂರ್ಣ ಹೇಳಿದ : ''ಪ್ರಭು, ಅವರು ಹಾಗೆ ಮಾಡಿದರೆ ಅವರು ದಯಾಪೂರ್ಣರು, ಸ್ನೇಹಿತರು ಎಂದು ಭಾವಿಸುತ್ತೇನೆ. ಏಕೆಂದರೆ ಅವರು ನನ್ನನ್ನು ಹೊಡೆಯಲಿಲ್ಲವಲ್ಲ ಎಂದು.'' ''ಒಂದು ವೇಳೆ ಹೊಡೆದರೆ?'' ಬುದ್ಧ ಕೇಳಿದ. ''ಆಗಲೂ ನಾನು ಭಾವಿಸುತ್ತೇನೆ, ಅವರು ದಯಾಪೂರ್ಣರೆಂದೇ. ಏಕೆಂದರೆ ಅವರು ಆಯುಧದಿಂದ ತಿವಿಯಲಿಲ್ಲವಲ್ಲ!'' ಎಂದು ಪೂರ್ಣ ಉತ್ತರಿಸಿದ. ''ಅವರು ಆಯುಧದಿಂದ ತಿವಿದರೆ?'' ಬುದ್ಧ ಮತ್ತೆ ಕೇಳಿದ. ಪೂರ್ಣನೆಂದ: ''ಆಗಲೂ ನಾನು ಅವರು ದಯಾಪೂರ್ಣರು, ಸ್ನೇಹಿತರು ಎಂದು ಭಾವಿಸುತ್ತೇನೆ. ಏಕೆಂದರೆ ಅವರು ನನ್ನನು ಕೊಲ್ಲಲಿಲ್ಲವಲ್ಲ!'' ''ಅವರು ನಿನ್ನನ್ನು ಕೊಂದೇ ಬಿಟ್ಟರೆ?'' – ಬುದ್ಧನ ಪ್ರಶ್ನೆ. ''ಒಳ್ಳೆಯದೇ ಆಯಿತು. ಏಕೆಂದರೆ ಈ ದೇಹಬಂಧನದಿಂದ ನನಗೆ ಬಿಡುಗಡೆಯಾದಂತಾಗುತ್ತದೆ'' – ಪೂರ್ಣ ಉತ್ತರಿಸಿದ. ಆಗ ಬುದ್ಧ ಸಂತೃಪ್ತನಾಗಿ ಪೂರ್ಣನನ್ನು ಆಶೀರ್ವದಿಸಿ ಕಳಿಸಿಕೊಟ್ಟ.

*(ಮುಂದುವರಿಯುವುದು)*

## ಭಗವದಿಚ್ಛೆ

**ಕೆ**ಲವು ವರ್ಷಗಳ ಹಿಂದೆ ಕಾನ್‌ಪುರದಲ್ಲಿ ಒಬ್ಬ ವಿಧವೆ ತಾಯಿಯ ಏಕಮಾತ್ರ ಪುತ್ರನ ದೇಹಾವಸಾನವಾಯಿತು. ಕೆಲವು ನಿಮಿಷಗಳ ಹಿಂದೆ ಆನಂದದ ಸಂತೆಯಾಗಿದ್ದ ಮನೆಯಲ್ಲಿ ಈಗ ಶೋಕದ ದಟ್ಟ ಮೋಡಗಳು ಆವರಿಸಿದವು. ನೋಡಿದರೆ ಮರುದಿನವೇ ಆ ಮೃತನಾದ ಮಗನ ವಿವಾಹವಾಗಲಿತ್ತು, ಸೊಸೆ ಮನೆಗೆ ಬರಲಿದ್ದಳು. ಅಂದು ಮಧ್ಯಾಹ್ನ ಮಗ ನೌಕರಿಯಿಂದ ಬಂದಿದ್ದನು. ತಾಯಿ ಸಂತೋಷದಿಂದ ಅಡಿಗೆಯನ್ನು ಮಾಡಿ ಬಡಿಸಿದ್ದಳು. ಅಷ್ಟರಲ್ಲಿ ಮಗ, ಹತ್ತು ನಿಮಿಷದಲ್ಲಿ ನಾನು ನನ್ನ ಮಿತ್ರನನ್ನು ಭೇಟಿಯಾಗಿ ಬರುತ್ತೇನೆಂದು ಹೇಳಿದನು. ತಾಯಿ, ''ಬಡಿಸಿದ ತಟ್ಟೆಯನ್ನು ಹಾಗೆ ಬಿಟ್ಟು ಹೋಗಬಾರದು. ಅದು ಅಪಶಕುನ. ಊಟ ಮಾಡಿ ಹೋಗು'' ಎಂದಳು. ಆದರೆ ಹುಡುಗ ಒಪ್ಪಲಿಲ್ಲ. ಮನೆಯಿಂದ ಹೊರಬಂದ ಐದು ನಿಮಿಷದೊಳಗೆ ರಸ್ತೆಯನ್ನು ದಾಟುವಾಗ ಟ್ರಕ್ ಹೊಡೆತಕ್ಕೆ ಅಲ್ಲಿಯೇ ತೀರಿಕೊಂಡನು.

ಟ್ರಕ್ ಡ್ರೈವರ್ ಯುವಕ ಹೆದರಿ ನಿಟ್ಟುಸಿರು ಬಿಡುತ್ತ ಮನೆಗೆ ಧಾವಿಸಿದನು. ಅವನ ಉದ್ವಿಗ್ನ ಮುಖವನ್ನು ಕಂಡು ಅವನ ತಾಯಿ ಏನಾಯಿತೆಂದು ಕೇಳಿದಳು. ಮಗ ಎಲ್ಲ ವಿಷಯವನ್ನು ತಿಳಿಸಿದನು. ಟ್ರಕ್ ಡ್ರೈವರ್ ಯುವಕ, ''ನನಗೆ ಬಹಳ ಹಸಿವೆಯಾಗಿದೆ. ಏನಾದರೂ ಆಹಾರವನ್ನು ಕೊಡು'' ಎಂದನು. ಅವನ ತಾಯಿ, ''ನಾವಿಬ್ಬರೂ ಹೋಗಿ ತೀರಿಕೊಂಡ ಯುವಕನ ತಾಯಿಯನ್ನು ಭೇಟಿಯಾಗುವವರೆಗೆ ನಮ್ಮಿಬ್ಬರಿಗೆ ಅನ್ನ-ಜಲವಿಲ್ಲ'' ಎಂದು ದೃಢವಾಗಿ ಹೇಳಿದಳು. ಅವರಿಬ್ಬರೂ ಮೃತಪುತ್ರನ ಮನೆಗೆ ಹೋದರು. ಅಲ್ಲಿ ನೋಡಿದರೆ ಹೃದಯ ವಿದ್ರಾವಕ ದೃಶ್ಯ!

ಟ್ರಕ್ ಡ್ರೈವರ್ ಯುವಕನ ತಾಯಿ ಅಳುತ್ತಲೇ, ''ಅಕ್ಕ, ನಿನ್ನ ರತ್ನವನ್ನು ಯಮಪುರಿಗೆ ಕಳುಹಿಸಿದ ನನ್ನ ಮಗ ನಿನ್ನ ಮುಂದೆ ಇದ್ದಾನೆ. ಇವನಿಗೆ ಯಾವ ಶಿಕ್ಷೆಯನ್ನು ಬೇಕಿದ್ದರೂ ಕೊಡು'' ಎಂದಳು.

ಆ ಮೃತ ಯುವಕನ ತಾಯಿ ಹೇಳಿದಳು, ''ಅಕ್ಕ, ನನ್ನ ಮಗನಾದರೇನು, ನಿನ್ನ ಮಗನಾದರೇನು? ಈಗ ಅವನಿಗೆ ಇಬ್ಬರು ತಾಯಂದಿರಾದರು. ಜೀವನದ ಘಟನೆಗಳೆಲ್ಲ ಭಗವಂತನ ಇಚ್ಛೆಯಂತೆ ನಡೆಯುವಾಗ ಅದಕ್ಕೆ ನಾನಾಗಲಿ, ನೀನಾಗಲಿ ಏನು ಮಾಡಲಾಗುತ್ತದೆ?'' ಅವಳ ಮಾತುಗಳನ್ನು ಕೇಳಿ ಅಲ್ಲಿದ್ದವರೆಲ್ಲ ಬೆರಗಾದರು.

ಮೃತನ ಆತ್ಮವೂ ತನ್ನ ತಾಯಿಯ ಹೃದಯ ವೈಶಾಲ್ಯವನ್ನು ಕಂಡು ಬೆರಗಾಗಿರಬೇಕು. ಆ ಟ್ರಕ್ ಡ್ರೈವರ್ ಯುವಕನೂ ತನ್ನ ಎರಡನೆಯ ತಾಯಿಯನ್ನು ಜೀವನವಿಡೀ ನೋಡಿಕೊಳ್ಳುವುದಾಗಿ ಮಾತುಕೊಟ್ಟನು.

**– ಜೇಠಾಲಾಲ್ ಕಾನಜಿ ಶಾಹ (ಅಖಂಡ ಆನಂದ)**

*(ಕೃಪೆ: 'ಕಲ್ಯಾಣ' ಮಾಸಪತ್ರಿಕೆ; ಸಂಗ್ರಹ: ಮಾತಾ ತ್ಯಾಗಮಯೀ)*

# ಚಿಕ್ಕ ಬುದ್ಧ

ಬಂಗಾಳಿ ಮೂಲ : ರಾಜಕೃಷ್ಣ ಭಟ್ಟಾಚಾರ್ಯ    ಚಿತ್ರ : ಜುಂಕೋ ಭಟ್ಟಾಚಾರ್ಯ    ಕನ್ನಡಾನುವಾದ : ಗಿರಿಜಾದೇವಿ



ಅನೇಕ ವರ್ಷಗಳ ಹಿಂದೆ ಒಂದು ಹಳ್ಳಿಯಲ್ಲಿ ಒಬ್ಬ ಮುದಕ ಮತ್ತು ಮುದುಕಿ ವಾಸವಾಗಿದ್ದರು. ಅವರು ತುಂಬಾ ಬಡವರು, ಅವರಿಗೆ ಬಂಧು ಬಳಗ ಯಾರೂ ಇರಲಿಲ್ಲ. ಅಂದು ವರ್ಷದ ಕೊನೆಯ ದಿನ. ಮರುದಿನದಿಂದ ಹೊಸ ವರ್ಷದ ಆರಂಭ. ಹೊಸ ವರ್ಷದ ಮೊದಲ ದಿನ ಒಮೋಚಿ (ಜಪಾನಿನ ಜನಪ್ರಿಯವಾದ ತಿಂಡಿ) ತಯಾರಿಸಿ ತಿನ್ನುವುದು ಸಂಪ್ರದಾಯ. ಆದರೆ ಒಮೋಚಿ ತಯಾರಿಸಲು ಬೇಕಾಗುವ ಅಕ್ಕಿ ಅವರ ಮನೆಯಲ್ಲಿ ಇರಲಿಲ್ಲ. ಆ ವಿಶೇಷ ಅಕ್ಕಿಯನ್ನು ಕೊಂಡುಕೊಳ್ಳಲು ಹಣ ಬೇಕಾಗುತ್ತದಲ್ಲ. ದುಃಖಿತಳಾದ ಮುದುಕಿಗೆ ಸಾಂತ್ವನ ನೀಡುತ್ತಾ ಮುದುಕ, ''ನೀನೇನೂ ಚಿಂತಿಸಬೇಡ. ನಾನು ಹುಲ್ಲಿನಿಂದ ಮಾಡಿದ ಕೆಲವು ಟೋಪಿಗಳನ್ನು ತಯಾರಿಸಿ, ನಗರಕ್ಕೆ ತೆಗೆದುಕೊಂಡು ಹೋಗಿ, ಮಾರಿ ಬಂದ ಹಣದಲ್ಲಿ ಅಕ್ಕಿ ತರುತ್ತೇನೆ'' ಎಂದ. ಬೇಗಬೇಗನೆ ಕೆಲವು ಟೋಪಿಗಳನ್ನು ಹೆಣೆದು ಸಿದ್ಧಪಡಿಸಿ, ಪಟ್ಟಣಕ್ಕೆ ಹೊರಟ ಮುದುಕ. ನಗರದಲ್ಲಿ ಎಲ್ಲೆಲ್ಲಿ ಸುತ್ತಾಡಿದರೂ ಟೋಪಿ ಕೊಂಡು ಕೊಳ್ಳುವವರು ಸಿಗಲೇ ಇಲ್ಲ. ಅವನು ಅತಿಯಾದ ದುಃಖದಿಂದ, ಭಾರವಾದ ಹೃದಯ ಹೊತ್ತು ಕಾಲೆಳೆಯುತ್ತಾ ಮನೆಯ ಕಡೆಗೆ ಹೊರಟ. ಅಷ್ಟರಲ್ಲಿ ಹಿಮಪಾತ ಪ್ರಾರಂಭವಾಯಿತು. ಹಾಗೆಯೇ ನಡೆಯುತ್ತಿರುವಾಗ ರಸ್ತೆಯ ಅಂಚಿನಲ್ಲಿ ಒಂದರ ಪಕ್ಕ ಒಂದರಂತೆ ನಿಲ್ಲಿಸಿದ್ದ ಚಿಕ್ಕ ಚಿಕ್ಕ ಬುದ್ಧನ ಮೂರ್ತಿಗಳನ್ನು ಕಂಡ ಮುದುಕ. ಈ ಒಜಿಜೋ ಸಾಮಾ (ಬುದ್ಧತ್ವವನ್ನು ಹೊಂದಿದ ಸಿದ್ಧ ಸಂನ್ಯಾಸಿಗಳು. ಇವರನ್ನು ಚಿಕ್ಕ ಬುದ್ಧರು ಎನ್ನುತ್ತಾರೆ) ಮೂರ್ತಿಗಳು ಅತ್ಯಂತ ಕರುಣಭಾವದಲ್ಲಿ ನಿಂತಿದ್ದವು.

ಹಿಮದ ಮಳೆಯಿಂದಾಗಿ ಅವುಗಳೆಲ್ಲವೂ ನೆನೆಯುತ್ತಿದ್ದವು. ಇದನ್ನು ನೋಡಿದ ಮುದುಕ ಆ ಪ್ರತಿಯೊಂದು ಮೂರ್ತಿಯ ತಲೆಯ ಮೇಲೆ ತನ್ನಲ್ಲಿದ್ದ ಟೋಪಿಗಳನ್ನು ಒಂದೊಂದರಂತೆ ತೊಡಿಸತೊಡಗಿದ. ಒಂದು ಮೂರ್ತಿಗೆ ಟೋಪಿ ಸಾಲದೆ ಬಂದಿತು. ಆಗ ಮುದುಕ ತನ್ನ ತಲೆಯ ಮೇಲಿದ್ದ ಟೋಪಿಯನ್ನೆ ತೆಗೆದು ಆ ಮೂರ್ತಿಯ ತಲೆಗೆ ತೊಡಿಸಿದ. ಮನೆಗೆ ಹಿಂದಿರುಗಿದ ನಂತರ ಮುದುಕಿಗೆ ನಡೆದ ಸಂಗತಿಗಳನ್ನೆಲ್ಲ ವಿವರವಾಗಿ ತಿಳಿಸಿದ. ಮುದುಕಿ ಉತ್ಸಾಹಗೊಂಡು ಆನಂದದಿಂದ ಮುದುಕನ ಕಾರ್ಯವನ್ನು ಮೆಚ್ಚಿಕೊಳ್ಳುತ್ತಾ, ''ಹೊಸವರ್ಷದ ದಿನ ಒಮೋಚಿ ತಿನ್ನುವುದೇನೂ ಬೇಕಿಲ್ಲ. ನೀನು ಬಹಳ ಒಳ್ಳೆಯ ಕಾರ್ಯ ಮಾಡಿದ್ದೀಯೆ. ಚಿಂತಿಸಬೇಡ'' ಎಂದಳು.

ರಾತ್ರಿಯಾಯಿತು. ಮುದುಕ, ಮುದುಕಿ ನೆಮ್ಮದಿಯಾಗಿ ಮಲಗಿದರು. ಮಧ್ಯರಾತ್ರಿಯ ವೇಳೆಯಲ್ಲಿ ಹೊರಗೆ ಯಾರೋ ಬಾಗಿಲು ಬಡಿದು ಖಟ ಖಟ ಸದ್ದು ಮಾಡಿದುದನ್ನು ಕೇಳಿಸಿಕೊಂಡ ಮುದುಕಿ, ''ಇಷ್ಟು ಹೊತ್ತಿನಲ್ಲಿ ಯಾರು ಬಂದರು?'' ಎಂದು ಚಕಿತಳಾಗಿ ಮುದುಕನನ್ನು ಎಬ್ಬಿಸಿದಳು. ಇಬ್ಬರೂ ಒಟ್ಟಿಗೆ ಹೊರಗೆ ಬಂದರು. ಅವರು ಕಂಡ ದೃಶ್ಯ ಅತ್ಯದ್ಭುತವಾಗಿತ್ತು!

ಚಿಕ್ಕ ಚಿಕ್ಕ ಬುದ್ಧರು ಅಷ್ಟೂ ಜನ ಅವರ ಮನೆಗೆ ಬಂದಿದ್ದರು. ಮೂಟೆ ಮೂಟೆ ಅಕ್ಕಿ ಮತ್ತು ಇತರ ಅಡುಗೆ ಸಾಮಗ್ರಿ ಮನೆ ತುಂಬಿತು. ಮುದುಕ ಮತ್ತು ಮುದುಕಿ ಆನಂದದ ಕಣ್ಣೀರು ಸುರಿಸುತ್ತಿದ್ದರು. ಎಲ್ಲ ಒಜಿಜೋ ಸಾಮಾರಿಗೂ ಅವರು ಶ್ರದ್ಧಾ ಭಕ್ತಿಗಳಿಂದ ಪ್ರಣಾಮಗಳನ್ನು ಸಲ್ಲಿಸಿದರು. ✷



# ನಾಮ ನೌಕೆ

– ಬ್ರಹ್ಮಚಾರಿ ವ್ಯೋಮಕೇಶ ಚೈತನ್ಯ

ಭಗವಂತನ ಸಾಕ್ಷಾತ್ಕಾರಕ್ಕೆ ಅತ್ಯಂತ ಸುಲಭವಾದ ಹಾಗೂ ಸಹಜವಾದ ಮಾರ್ಗವೇ ನಾಮಜಪ ಸಾಧನೆ. ಅನೇಕ ಸಾಧುಸಂತರ ವಾಣಿಯ ಹಿನ್ನೆಲೆಯಲ್ಲಿ ಈ ವಿಷಯವನ್ನು ವಿವರಿಸಿರುವ ಲೇಖಕರು ಪೊನ್ನಂಪೇಟೆಯ ಶ್ರೀರಾಮಕೃಷ್ಣ ಶಾರದಾಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**ಮಾನವ ಜನ್ಮದ ಮಹತ್ವ:** ಭಗವಂತನ ಈ ಸೃಷ್ಟಿಯಲ್ಲಿ ನಾವು ಚೇತನ ಮತ್ತು ಅಚೇತನ ಎಂಬ ಎರಡು ವರ್ಗಗಳನ್ನು ಕಾಣುತ್ತೇವೆ. ಚೇತನದಲ್ಲಿ ಮತ್ತೆ ಪ್ರಾಣಿವರ್ಗ, ಮನುಷ್ಯವರ್ಗ ಎಂಬ ಎರಡು ವಿಭಾಗಗಳನ್ನು ನೋಡುತ್ತೇವೆ. ಸ್ವತಂತ್ರವಾಗಿ ಆಲೋಚನೆ ಮಾಡುವ, ತನ್ನ ಜೀವನವನ್ನು ತನಗೆ ಬೇಕಾದಂತೆ ರೂಪಿಸಬಲ್ಲ ಬುದ್ಧಿಶಕ್ತಿ, ಪ್ರಜ್ಞೆ ಕೇವಲ ಮನುಷ್ಯನಿಗೆ ಮಾತ್ರ ಉಂಟು, ಮತ್ತಾವ ಚೇತನಕ್ಕೂ ಇಲ್ಲ. ಆದುದರಿಂದಲೇ 'ಮಾನವ ಜನ್ಮ ದೊಡ್ಡದು, ಅದ ಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ!' ಎಂದರು ಪುರಂದರ ದಾಸರು. ಇಂತಹ ಅಮೂಲ್ಯವಾದ ಮಾನವಜನ್ಮವನ್ನು ಪಡೆಯು ವುದಕ್ಕೆ ಮುಂಚೆ ಜೀವಿಯು ಎಂಬತ್ತನಾಲ್ಕು ಲಕ್ಷ ಜನ್ಮಗಳನ್ನು ಹಾದುಬಂದಿದೆ ಎನ್ನುತ್ತವೆ ನಮ್ಮ ಪುರಾಣಗಳು.

ಶಂಕರಾಚಾರ್ಯರು ತಮ್ಮ *'ವಿವೇಕಚೂಡಾಮಣಿ'*ಯಲ್ಲಿ ಹೀಗೆ ಹೇಳುತ್ತಾರೆ:

**ದುರ್ಲಭಂ ತ್ರಯಮೇವೈತದ್ದೈವಾನುಗ್ರಹ-ಹೇತುಕಮ್।**
**ಮನುಷ್ಯತ್ವಂ ಮುಮುಕ್ಷತ್ವಂ ಮಹಾಪುರುಷ-ಸಂಶ್ರಯಃ॥**

'ಭಗವಂತನ ಅನುಗ್ರಹವೇ ಕಾರಣವಾಗಿರುವ ಈ ಮೂರು ಕಷ್ಟಸಾಧ್ಯವೇ; ಮನುಷ್ಯಜನ್ಮ, ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆ ಮತ್ತು ಮಹಾತ್ಮರ ಸಂಗ.'

ಹಾಗಾದರೆ ಪಡೆಯಲು ದುರ್ಲಭವಾದ ಈ ಮನುಷ್ಯಜನ್ಮದ ಗುರಿ ಯಾವುದು? ಉತ್ತರವಾಗಿ ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಾರೆ, 'ಭಗವತ್ಸಾಕ್ಷಾತ್ಕಾರವೇ ಮಾನವ ಜನ್ಮದ ಪರಮಗುರಿ' ಎಂದು. *ಕೇನೋಪನಿಷತ್* ಕೂಡ ಇದನ್ನೇ ಸೂಚಿಸುತ್ತದೆ,

**ಇಹ ಚೇದವೇದೀದಥ ಸತ್ಯಮಸ್ತಿ**
**ನ ಚೇದಿಹಾವೇದೀನ್ಮಹತೀ ವಿನಷ್ಟಿಃ ॥** – ಎಂದು. ಅಂದರೆ 'ದೇಹದಲ್ಲಿರುವಾಗಲೇ ಸತ್ಯವನ್ನು ಅರಿತುಕೊಂಡರೆ ಪರಮಾರ್ಥ ಸತ್ಯವು ಲಾಭವಾಗಿ ಜನ್ಮ ಸಾರ್ಥಕವಾಗುವುದು. ಇಲ್ಲದಿದ್ದರೆ ದೊಡ್ಡ ವಿನಾಶವಾಗುತ್ತದೆ' ಎಂದು. ಹಾಗಾದರೆ ಇಂಥ ಭಗವತ್ಸಾಕ್ಷಾ ತ್ಕಾರವನ್ನು ಪಡೆಯಲು ಯಾವುದು ಮಾರ್ಗವೆಂದು ಪ್ರಶ್ನಿಸಿದರೆ ಅದಕ್ಕೆ ಹಲವು ಸಾಧನಾವಿಧಾನಗಳನ್ನು ಶಾಸ್ತ್ರಗಳು ವಿಧಿಸುತ್ತವೆ. ಆದರೆ ಕಲಿಯುಗಕ್ಕೆ ನಾರದೀಯ ಭಕ್ತಿ, ನಾಮಗುಣಸಂಕೀರ್ತನೆಯೇ ಸೂಕ್ತ ಸಾಧನವೆಂದು ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಾರೆ. ಅವರ ಮಾತುಗಳಲ್ಲೇ ಹೇಳುವುದಾದರೆ, ''ಕಲಿಯುಗಕ್ಕೆ ನಾರದೀಯ ಭಕ್ತಿ, ಸರ್ವದಾ ಆತನ ನಾಮಗುಣ ಕೀರ್ತನೆ ಮಾಡೋದು. ಯಾರಿಗೆ ಸಮಯವೇ ಇಲ್ಲವೋ ಅವರು ಪ್ರಾತಃಕಾಲ ಸಾಯಂ ಕಾಲ ಕೈತಾಳ ಹಾಕುತ್ತಾ ನಾಮಜಪಮಾಡಲಿ.''

''ಪ್ರಾಚೀನ ಕಾಲದಲ್ಲಿ ಜನರು ಯೋಗ, ಯಾಗ, ತಪಸ್ಸು ಗಳನ್ನು ಮಾಡುತ್ತಿದ್ದರು. ಈಗ ಕಲಿಯುಗದ ಜೀವಕ್ಕೆ ಪ್ರಾಣವೆಲ್ಲ ಆಹಾರದಲ್ಲಿದೆ. ಮನಸ್ಸು ದುರ್ಬಲ. ಏಕಾಗ್ರ ಮನಸ್ಸಿನಿಂದ ಹರಿ ನಾಮವೊಂದನ್ನು ಜಪಿಸಿದರೆ ಸಾಕು. ಎಲ್ಲಾ ದುಃಖ-ಕಷ್ಟಗಳೂ ದೂರವಾಗಿಬಿಡುತ್ತದೆ. ನಾಮಜಪವನ್ನು ಮಾಡು, ಜೊತೆ ಜೊತೆ ಯಲ್ಲಿಯೇ ಪ್ರಾರ್ಥನೆಯನ್ನು ಮಾಡು. ಇದರಿಂದ ಭಗವಂತನಲ್ಲಿ ಭಕ್ತಿಯುಂಟಾಗುತ್ತದೆ, ಮತ್ತು ಈ ಜಗತ್ತಿನ ಅಶಾಶ್ವತ ವಸ್ತುಗಳ ಮೇಲೆ ಇರುವ ಪ್ರೀತಿ ಕಡಿಮೆಯಾಗುತ್ತದೆ.''

ನಾಮ ಎಂದರೇನು? ಭಗವನ್ನಾಮ ಜಪಮಾಡುವ ಬಗೆ, ಹಾಗೂ ಯಾವ ರೀತಿಯಾಗಿ ಜಪ ಸಾಧನೆ ಮಾಡಿದರೆ ಭಗವಂತನ

ಸಾಕ್ಷಾತ್ಕಾರವಾಗುತ್ತದೆ ಎಂಬುದರ ಬಗ್ಗೆ ಅನೇಕ ಸಾಧು-ಸಂತರು ಬೆಳಕು ಚೆಲ್ಲಿದ್ದಾರೆ. ಅದನ್ನೀಗ ನಾವು ನೋಡೋಣ. ಮೊದಲಿಗೆ ಜಪದ ಅರ್ಥವನ್ನು ತಿಳಿದುಕೊಳ್ಳೋಣ. ಜಪವೆಂದರೆ **ತಜ್ಜಪಸ್ತದರ್ಥಭಾವನಮ್** ಎಂದು *ಪಾತಂಜಲ ಯೋಗಸೂತ್ರ*ದಲ್ಲಿ ಹೇಳಿದೆ. ಎಂದರೆ ಮಂತ್ರದ ಅರ್ಥವನ್ನು ಭಾವಿಸುತ್ತಿರುವುದು, ಮಂತ್ರವನ್ನು ಜಪಿಸುವುದು ಎಂದರ್ಥ. ಪರಮಾತ್ಮನನ್ನು ವೇದದ ಮಂತ್ರದಿಂದ ಭಾವನೆ ಮಾಡುತ್ತಿರುವುದು, ಆತನ ನಾಮಸ್ಮರಣೆಯನ್ನು ಮಾಡುತ್ತಿರುವುದೂ ಜಪವೆ.

**೧. ನಾಮವು ಭಗವತ್‌ಸ್ವರೂಪವೇ ಆಗಿರುತ್ತದೆ:** ಭಗವನ್ನಾಮ ಕೀರ್ತನೆಯ ಒಂದು ಪ್ರಕಾರವೇ ನಾಮಜಪ. ಯಾವ ಪೂರ್ವ ನಿಯಮಗಳೂ ಇಲ್ಲದ ಜಪವು ಬಹು ಸುಲಭಸಾಧ್ಯ. ಆದರೂ ಮಹತ್ವದಲ್ಲಿ ಯಾವ ರೀತಿಯಲ್ಲಿಯೂ ಇತರ ಸಾಧನೆಗಳಿಗಿಂತ ಕಡಿಮೆಯಿಲ್ಲ. ಆದುದರಿಂದಲೇ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ (೧೦-೨೫) **'ಯಜ್ಞಾನಾಂ ಜಪಯಜ್ಞೋಽಸ್ಮಿ'** - 'ನಾನು ಯಜ್ಞಗಳಲ್ಲಿ ಜಪಯಜ್ಞ' ಎಂದು ಜಪದ ಮಹಿಮೆಯನ್ನು ಸಾರುತ್ತಾನೆ. ಜಪದಿಂದ ಭಗವಂತನ ಪ್ರಾಪ್ತಿಯಾಗುವುದೆಂದೂ, ಆಮೇಲೆ ಭಗವಂತ ನಮ್ಮನ್ನು ಕಾಪಾಡುವನೆಂದೂ ಭಾವಿಸಿದರೆ ಸಾಲದು. ಭಗವಂತನು 'ನಾನೇ ಜಪಯಜ್ಞ' ಎಂದಿರುತ್ತಾನೆ. ಜಪವೇ ಪರಮಾತ್ಮನ ಸ್ವರೂಪವೆಂದು ಭಾವಿಸಬೇಕು. ಬಲ್ಲವರು ವೇದವನ್ನು ಭಗವಾನ್ ಆಮ್ನಾಯಃ (ವೇದ ಭಗವಂತನು) ಎಂದು ಕರೆಯುತ್ತಾರೆ. ಪರಮಾತ್ಮನು ವೇದವೇದ್ಯನೆಂದಲ್ಲ, ವೇದವೇ ಭಗವಂತನು; ಇದರಿಂದ ಮಂತ್ರ, ಪರಮಾತ್ಮನ ನಾಮ ಎಲ್ಲವೂ ಪರಮಾತ್ಮನೇ ಎಂದು ನಾವು ಬಗೆಯಬೇಕು.

'ರಾಮ' ಎಂಬುದು ಬರಿಯ ಶಬ್ದವಲ್ಲ, ಬಾಯಲ್ಲಿ ಹುಟ್ಟಿದ ಬರಿಯ ಧ್ವನಿಯಲ್ಲ.; ಅವ್ಯಕ್ತನಾದ ರಾಮನೇ ಈ ನಾಮರೂಪದಿಂದ ಪ್ರಕಟವಾಗುತ್ತಾನೆ. ಧ್ರುವ, ಪ್ರಹ್ಲಾದ ಮುಂತಾದವರಿಗೆ ಭಗವಂತನು ಪ್ರಕಟನಾದನಲ್ಲವೆ? ಹಾಗೆಯೇ ಭಗವಂತನು ನಾಮಜಪವನ್ನು ಭಕ್ತಿಯಿಂದ ಮಾಡುವವರಿಗೆ ನಾಮರೂಪದಿಂದ ಪ್ರಕಟವಾಗುತ್ತಾನೆ. ಹೀಗೆಂದು ಸಂತರು ಹೇಳಿರುತ್ತಾರೆ.

**೨.ಭಗವನ್ನಾಮವನ್ನು ಸದ್ಗುರುಗಳಿಂದ ತೆಗೆದುಕೊಳ್ಳುವುದು ಶ್ರೇಯಸ್ಕರ :** ಭಗವಂತನ ನಾಮವನ್ನು ಸದ್ಗುರುಗಳಿಂದಲೇ ತೆಗೆದುಕೊಳ್ಳಬೇಕೋ ಅಥವಾ ನಾವೇ ನಮ್ಮ ಅಭಿರುಚಿಗನುಸಾರವಾಗಿ ತೆಗೆದುಕೊಂಡರೆ ಆಗುತ್ತದೆಯೆ? ವಾಸ್ತವಿಕವಾಗಿ ಭಗವಂತನ ನಾಮವು ಸ್ವತಃಸಿದ್ಧ ಹಾಗೂ ಪರಿಪೂರ್ಣವಾಗಿರುತ್ತದೆ. ಅದಕ್ಕೆ ಬೇರೆ ಎಲ್ಲಿಂದಲೂ ಪೂರ್ಣತೆಯನ್ನು ತಂದುಕೊಡಬೇಕಾಗುವುದಿಲ್ಲ. ಆದ್ದರಿಂದ ಸದ್ಗುರುಗಳಿಂದ ಪಡೆದುಕೊಂಡ ನಾಮದಲ್ಲಿ ಹಾಗೂ ನಮ್ಮ ಅಪೇಕ್ಷೆಗನುಸಾರವಾಗಿ ತೆಗೆದುಕೊಂಡ ನಾಮದಲ್ಲಿ ಭೇದ ಮಾಡಲು ಬರುವುದಿಲ್ಲ. ಆದರೆ ಸಂಪ್ರದಾಯದಂತೆ ಗುರುವಿನಿಂದ ಪಡೆದುಕೊಂಡ ನಾಮದಲ್ಲಿ ವಿಶೇಷತೆ ಇರುತ್ತದೆ ಎಂದು ಬಲ್ಲವರು ಹೇಳುತ್ತಾರೆ. ಏಕೆಂದರೆ ಸದ್ಗುರುಗಳು ಆ ಭಗವನ್ನಾಮದ ಹಿಂದೆ ಸತ್ತಾರೂಪದಿಂದ ಇರುತ್ತಾರೆ ಹಾಗೂ ನಮ್ಮಿಂದ ನಾಮಸ್ಮರಣೆಗೆ ಆಗುವ ವಿಷಯದಲ್ಲಿ ತುಂಬಾ ಸಹಾಯಮಾಡುತ್ತಾರೆ. ಆದ್ದರಿಂದ ನಾವು ನಾಮಸ್ಮರಣೆ ಮಾಡುವಾಗ ನಾಮಸ್ಮರಣೆಯು ಗುರುಗಳ ಅನುಗ್ರಹದಿಂದಲೇ ಆಗುತ್ತಿರುವುದೆಂಬ ಅರಿವು ಉಂಟಾಗುತ್ತದೆ. ''ನಾನು ನಾಮಸ್ಮರಣೆ ಮಾಡುತ್ತೇನೆ'' ಎಂಬ ಅಹಂಕಾರ ಉತ್ಪನ್ನವಾಗಲು ಅವಕಾಶವೇ ಇರುವುದಿಲ್ಲ.

**೩. ನಾಮಸ್ಮರಣೆ ಹಾಗೂ ಏಕಾಗ್ರತೆ:** ನಾಮಸ್ಮರಣೆ ಮಾಡುವಾಗ ಮನಸ್ಸು ಏಕೆ ಏಕಾಗ್ರವಾಗುವುದಿಲ್ಲ? ಅದಕ್ಕಾಗಿ ಏನು ಮಾಡಬೇಕು? ಇದಕ್ಕೆ ಉತ್ತರವನ್ನು ಬ್ರಹ್ಮಚೈತನ್ಯ ಗೋಂದಾವಲೇಕರ್ ಮಹಾರಾಜ್ ಅವರು ಹೇಳುತ್ತಾರೆ. ''ನಾಮಸ್ಮರಣೆ ಮಾಡುವಾಗ ಮನಸ್ಸಿನಲ್ಲಿ ಸಾವಿರಾರು ವಿಚಾರಗಳು ಬರುತ್ತವೆ. ಅವುಗಳನ್ನು ನಿಯಂತ್ರಿಸುವ ಮೊದಲನೆಯ ಉಪಾಯವೆಂದರೆ ಆ ವಿಚಾರಗಳ ಬೆನ್ನುಹತ್ತಿ ಹೋಗದೆ ಇರುವುದು. ಆ ವಿಚಾರಗಳಿಗೆ ಕವಲು ಒಡೆದು ಅವುಗಳನ್ನು ಬೆಳೆಸುತ್ತಾ ಹೋಗಬಾರದು. ಅಂದರೆ ಮನೋರಾಜ್ಯವನ್ನು ಕಟ್ಟಬಾರದು. ವಿಚಾರಗಳು ಹೇಗೆ ಬರುತ್ತವೆಯೋ ಹಾಗೆ ಹೋಗುತ್ತವೆ. ಅವುಗಳ ಕಡೆಗೆ ಲಕ್ಷ್ಯ ಕೊಡಬಾರದು. ನಾಮಸ್ಮರಣೆ ಮಾಡುವಾಗ ನಾವು ಅದನ್ನು ಕಿವಿಯಿಂದ ಕೇಳಬೇಕು. ಅದರಿಂದ ಏಕಾಗ್ರತೆ ಸಾಧಿಸಲು ಅನುಕೂಲವಾಗುತ್ತದೆ. ಎರಡನೆಯದಾಗಿ, ಯಾವುದರಲ್ಲಿ ನಮಗೆ ಆಸಕ್ತಿ ಇರುತ್ತದೆಯೋ ಅದರಲ್ಲಿ ಮನಸ್ಸು ಸಹಜವಾಗಿ ಏಕಾಗ್ರವಾಗುತ್ತದೆ. ನಮಗೆ ವಿಷಯದ ಆಸಕ್ತಿ ಇರುವುದರಿಂದ ವಿಷಯ ಸೇವನೆಯಲ್ಲಿ ನಾವು ಏಕಾಗ್ರವಾಗುತ್ತೇವೆ. ಅಂದಮೇಲೆ ಇದೇರೀತಿ ನಾವು ಭಗವಂತನಲ್ಲಿ ಆಸಕ್ತವಾದರೆ ಅವನಲ್ಲಿ ಏಕಾಗ್ರವಾಗುವುದಿಲ್ಲವೆ?'' ಎಂದೆನ್ನುತ್ತಾರೆ ಬ್ರಹ್ಮಚೈತನ್ಯರು.

ಈ ಸಂದರ್ಭದಲ್ಲಿ ಶ್ರೀಮಾತೆ ಶಾರದಾದೇವಿಯವರು ಜಪದ ಬಗ್ಗೆ ತಮ್ಮ ಒಬ್ಬ ಭಕ್ತನಿಗೆ ಹೇಳಿದ ಮಾತನ್ನು ನೆನೆಪಿಸಿಕೊಳ್ಳಬಹುದು. ಅವರು ಹೇಳುತ್ತಾರೆ, ''ನೀನು ಮಂತ್ರವನ್ನು ಉಚ್ಚರಿಸಬಹುದು. ಮನಸ್ಸು ಏಕಾಗ್ರವಾದಾಗ ಭಗವನ್ನಾಮವನ್ನೊಮ್ಮೆ ಉಚ್ಚರಿಸುವುದು, ಹಾಗಿಲ್ಲದಾಗ ಲಕ್ಷಾಂತರ ವೇಳೆ ಉಚ್ಚರಿಸುವುದಕ್ಕಿಂತ ಮೇಲು. ದಿನವೆಲ್ಲ ದೇವರ ಹೆಸರನ್ನು ಉಚ್ಚರಿಸಬಹುದು, ಆದರೆ ಮನಸ್ಸು ಬೇರೆಕಡೆ ಇದ್ದರೆ ಅಷ್ಟು ಪ್ರಯೋಜನವಿಲ್ಲ. ಜಪ ಮಾಡುವಾಗ ಧ್ಯಾನ ಮಾಡಬೇಕು. ಆಗ ಮಾತ್ರ ಭಗವಂತನ ಕೃಪೆ ಪಡೆಯಬಹುದು.'' ಅವರ ಈ ವಚನಾಮೃತ ಜಪಸಾಧನೆಯಲ್ಲಿ ಏಕಾಗ್ರತೆಯ ಆವಶ್ಯಕತೆಯನ್ನು ಎತ್ತಿ ತೋರಿಸುತ್ತದೆ.

**೪. ನಾಮರೂಪಗಳ ಸಂಬಂಧ:** ನಾಮ ಜಪ ಮಾಡುವಾಗ ರೂಪದ ಧ್ಯಾನವು ಅವಶ್ಯವೆ? ಅದಕ್ಕೆ ಬ್ರಹ್ಮಚೈತನ್ಯರು ಹೇಳುತ್ತಾರೆ, ''ವಾಸ್ತವಿಕವಾಗಿ ನಾಮ ಹಾಗೂ ರೂಪ ಭಿನ್ನವಲ್ಲ. ಆದರೆ ನಾಮವು ರೂಪದ ಮೊದಲು ಇರುತ್ತದೆ, ಹಾಗೂ ನಂತರವೂ ಇರುತ್ತದೆ. ನಾಮ-ರೂಪವನ್ನು ವ್ಯಾಪಿಸಿಕೊಂಡಿರುತ್ತದೆ. ರಾಮನು ಹುಟ್ಟುವು

ದಕ್ಕೆ ಮೊದಲೇ ವಾಲ್ಮೀಕಿಗಳು ರಾಮಾಯಣವನ್ನು ಬರೆದರು ಹಾಗೂ ರಾಮನು ಅನಂತರ ಜನ್ಮತಾಳಿ ಅದರಲ್ಲಿ ಹೇಳಿದಂತೆ ಆಚರಣೆ ಮಾಡಿ ತೋರಿಸಿದನು. ಅಂದರೆ ರೂಪವು ಅಸ್ತಿತ್ವದಲ್ಲಿ ಬರುವುದಕ್ಕಿಂತಲೂ ಮುಂಚೆ ನಾಮವು ಇತ್ತು ಹಾಗೂ ರೂಪವು ಅದೃಶ್ಯವಾದರೂ ನಾಮ ಮಾತ್ರ ಇದ್ದೇ ಇದೆ. ದೇಶಕಾಲದ ಆಚೆಗೆ ರೂಪವು ಯಾವುದು ಅಖಂಡವಾಗಿ ಉಳಿಯುವುದೋ ಅದು ಸತ್ಯವಾಗಿರುತ್ತದೆ. ಪ್ರತ್ಯಕ್ಷವಾಗಿ ಆಕಾರದಲ್ಲಿ ಬಂದ ಅನೇಕ ರೂಪ ಗಳು ಇಲ್ಲದಂತಾದ ಮೇಲೆಯೂ ಅವುಗಳ ನಾಮವು ಸ್ಥಿರವಾಗಿ ಉಳಿಯುತ್ತದೆ.''

ಶ್ರೀರಾಮಕೃಷ್ಣ ಪರಮಹಂಸರು ಹೇಳುತ್ತಾರೆ:

''ಭಗವನ್ನಾಮದಲ್ಲಿ ರುಚಿ ಇರಲಿ. ಭಗವಂತನ ನಾಮವನ್ನು ಜಪಿಸುತ್ತಿರಬೇಕು. ಯಾವುದು ನಾಮವೋ ಅದೇ ಭಗವಂತ. ನಾಮವೂ ನಾಮಿಯೂ ಅಭಿನ್ನವೆಂದರಿತು ಸರ್ವದಾ ಪ್ರೀತಿ ಸಹಿತ ವಾಗಿ ದುರ್ಗಾನಾಮವನ್ನೋ, ಕೃಷ್ಣನಾಮವನ್ನೋ, ಶಿವನಾಮ ವನ್ನೋ ಜಪಿಸುತ್ತಾ ಭಗವಂತನನ್ನು ಕರೆಯಲೊಲ್ಲೆಯೇಕೆ? ನಾಮ ವೇನು ಕಮ್ಮಿಯೆ? ಅವನ ಮತ್ತು ಅವನ ನಾಮ ಭಿನ್ನವಲ್ಲ.''

**೫. ನಾಮದಲ್ಲಿ ಪ್ರೇಮ:** ಭಗವಂತನ ನಾಮಜಪವನ್ನು ಅತ್ಯಂತ ಶ್ರದ್ಧೆಯಿಂದ ಮಾಡಬೇಕು. ಯಾವಾಗಲೂ ಭಗವಂತನ ನಾಮಜಪ ವನ್ನು ಮಾಡುತ್ತಲೇ ಇರಬೇಕು. ಹೀಗೆ ಮಾಡಿದರೆ ಅಂತಃಕರಣವು ಶುದ್ಧವಾಗುತ್ತದೆ. ಅಂತಃಕರಣವು ಶುದ್ಧವಾಯಿತೆಂದರೆ ಭಗವ ತ್ಪ್ರೇಮ ಬರುತ್ತದೆ. ಕೇವಲ ಬಹಳಷ್ಟು ಜಪ ಮಾಡುವುದಕ್ಕಿಂತ ವಿವೇಕ ಹಾಗೂ ವಿಚಾರದಿಂದ ಉಂಟಾದ ಪ್ರೇಮವು ಭಗವನ್ನಾಮ ದಲ್ಲಿರಬೇಕು. ಇದು ಎಲ್ಲ ಸಾಧುಗಳ, ಹಾಗೂ ಜಪದಿಂದಲೇ ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡ ಸಂತರ ವಾಣಿಯಾಗಿದೆ. ಶ್ರೀರಾಮಕೃಷ್ಣ ಪರಮಹಂಸರ ನೇರ ಶಿಷ್ಯರಲ್ಲಿ ಒಬ್ಬ ರಾದ ಸ್ವಾಮಿ ಶಿವಾನಂದರು (ಮಹಾಪುರುಷ್ ಮಹಾರಾಜರು) ಜಪ ಹೇಗೆ ಮಾಡಬೇಕು ಎಂದು ಕೇಳಿದ್ದ ತಮ್ಮ ಒಬ್ಬ ಭಕ್ತನಿಗೆ ಹೀಗೆ ಹೇಳುತ್ತಾರೆ:

''ನೀನು ಓದಿಲ್ಲವೇ, ಗುರುಮಹಾರಾಜ್ (ಶ್ರೀರಾಮಕೃಷ್ಣ ಪರಮಹಂಸರು) ತಾಯಿಯ ಮುಂದೆ ಹೇಗೆ ಮೊರೆ ಇಡುತ್ತಿದ್ದರು ಎಂದು? 'ತಾಯಿ, ಈ ಬದುಕಿನಲ್ಲಿ ಮತ್ತೊಂದು ದಿನ ಕಳೆದು ಹೋಯಿತು. ನನಗಿನ್ನೂ ನಿನ್ನ ದರ್ಶನವಾಗಿಲ್ಲ!' ಎಂದು ಕಂಬನಿ ಗರೆದು ಗೋಳಿಡುತ್ತಾ ಧೂಳಿನಲ್ಲಿ ಹೊರಳಾಡಿ ನೆಲಕ್ಕೆ ಮೋರೆ ತೀಡುತ್ತಿದ್ದರು. ಶ್ರೀಚೈತನ್ಯ ದೇವರೂ ಕೂಡ 'ಹೇ ಭಗವಾನ್, ನಿನ್ನ ನಾಮಜಪದಲ್ಲಿ ನನಗೇಕೆ ಇನ್ನೂ ಆನಂದ ಉಂಟಾಗುತ್ತಿಲ್ಲ?' ಎಂದು ಸಂಕಟದಿಂದ ದೇವರಲ್ಲಿ ಮೊರೆಯಿಡುತ್ತಿದ್ದರು. ಹಾಗೆ ಗೋಳಿಡುತ್ತಾ ಅವರೂ ನೆಲದ ಹುಲ್ಲಿಗೆ ಮೋರೆ ತೀಡುತ್ತಿದ್ದರು. ಭಗವನ್ನಾಮ ಜಪವನ್ನು ಅಂತಹ ಹೃತ್ಪೂರ್ವಕವಾದ ಶ್ರದ್ಧೆಯಿಂದ ಮಾಡಬೇಕು. ದೇವರ ನಾಮ ಎಂದರೆ ಏನೆಂದುಕೊಂಡಿದ್ದೀಯಾ? ಭಗವತ್ ಸ್ವರೂಪವೇ ಭಗವನ್ನಾಮ ರೂಪವಾಗಿದೆ. ಅದರ ಉಚ್ಚಾರಣೆ ಹೃದಯಕ್ಕೆ ಶಕ್ತಿ ತರುತ್ತದೆ. ಭಗವನ್ನಾಮ ಜಪವನ್ನು ಎಂದಿಗೂ ಮರೆಯಬೇಡ. ಮತ್ತೆ ಮತ್ತೆ ಪ್ರಾರ್ಥನೆ ಮಾಡುವುದನ್ನು ತೊರೆಯಬೇಡ. ಭಗವಂತನು ನೋಡುವುದು ಹೃದಯದ ಅಭೀಪ್ಸೆ ಯನ್ನು. ಭಕ್ತಿ ಒಂದಿದ್ದರಾಯಿತು, ಉಳಿದುದನ್ನು ಲೆಕ್ಕಿಸಬೇಕಾಗಿಲ್ಲ. ಪ್ರೇಮಭರದಿಂದ ಅವನ ನಾಮವನ್ನು ಒಮ್ಮೆ ಜಪಿಸಿದರೂ ಸಾಕು; ಮನಸ್ಸು, ಪ್ರಾಣ ಆನಂದಪೂರ್ಣವಾಗುತ್ತವೆ. ಪ್ರೇಮಸಹಿತವಾಗಿ ಒಂದೇ ಒಂದು ಸಾರಿ ಅವನ ಹೆಸರು ಹೇಳಿದರೂ ಸಾಕು, ಲಕ್ಷ ಲಕ್ಷ ಬಾಯಿ ಜಪಕ್ಕಿಂತಲೂ ಹೆಚ್ಚಿನ ಪರಿಣಾಮವಾಗುತ್ತದೆ.''

**೬. ನಾಮ ಸಾಧನೆ ಮಾಡುವ ಬಗೆ: 'ಅವ್ಯಾವೃತ್ತಭಜನಾತ್'** – ಇದು ದೇವರ್ಷಿ ನಾರದರ ಸೂತ್ರಗಳಲ್ಲಿ ಬರುವ ಕೊನೆಯ ಸೂತ್ರ. ಅಂದರೆ ಎಡಬಿಡದೆ ಮಾಡಿದ ಭಜನೆಯಿಂದ (ಅದು) ದೊರಕುತ್ತದೆ. ಈ ಸೂತ್ರಕ್ಕೆ ಪೂಜ್ಯ ಸ್ವಾಮಿ ಹರ್ಷಾನಂದರು ತಮ್ಮ 'ದೇವರ್ಷಿ ನಾರದರ ಭಕ್ತಿ ಸೂತ್ರಗಳು' ಎಂಬ ಪುಸ್ತಕದಲ್ಲಿ ಅರ್ಥವನ್ನು ವಿವರಿ ಸುತ್ತಾ ಬರೆಯುತ್ತಾರೆ: ''ಭಗವದ್‌ಭಕ್ತಿಯನ್ನು ಪಡೆಯುವ ಸಾಧನಾಪಥದಲ್ಲಿ ವಿಷಯ–ತ್ಯಾಗ ಸಂಗತ್ಯಾಗಗಳು ಮೊದಲ ಹೆಜ್ಜೆ ಯಾದರೆ, ಅವ್ಯಾವೃತ್ತ ಭಜನೆ ಎರಡನೆಯ ಹೆಜ್ಜೆ. ಅದು 'ತ್ಯಾಗ' ರೂಪದ್ದಾದರೆ ಇದು 'ಯೋಗ' ರೂಪದ್ದು. ಮನಃಶಕ್ತಿಯನ್ನು ಉಪ ಯೋಗಿಸಿ ಬಲವಂತದಿಂದ ವಿಷಯವಸ್ತುವನ್ನು ತ್ಯಜಿಸಬಹುದು. ಆದರೆ ಅದರ ಬಗ್ಗೆ ಇರುವ ರಸ ಅಥವಾ ಸಂಗ ಅಷ್ಟು ಬೇಗ ಹೋಗ ಲಾರದು. ಅದಕ್ಕಿಂತ ರುಚಿಯಾದ ಮತ್ತೊಂದು ವಸ್ತು ಮನಸ್ಸಿಗೆ ಸಿಕ್ಕರೆ ಮಾತ್ರ ಆಗ ಮನಸ್ಸು ಅದನ್ನು ಬಿಡುತ್ತದೆ. ಭಗವಂತನನ್ನು ಎಡಬಿಡದೆ ಭಜಿಸುತ್ತಿದ್ದರೆ ವಿಷಯವಸ್ತುವು ಕ್ರಮೇಣ ಮರೆತು ಹೋಗುತ್ತದೆ. ಭಗವದನುರಾಗವು ಕ್ರಮೇಣ ತೀವ್ರ ಭಕ್ತಿಯಾಗಿ ಪರಿಣಮಿಸುತ್ತದೆ. ಭಜನೆಯೆಂದರೆ ಪ್ರೀತಿಪೂರ್ವಕ ಸೇವೆ, ಪೂಜೆ, ನಾಮಜಪಾದಿಗಳು. ಇದನ್ನು ಒಂದೆರಡು ಸಲ ಮಾಡಿದರೆ ಸಾಲದು. ನಿರಂತರವಾಗಿ, ಪರಮಾತ್ಮನು ದೃಢಮನದಲ್ಲಿ ನೆಲಸುವವರೆಗೆ, ಭಕ್ತಿಯು ದೃಢವಾಗುವವರೆಗೆ ಮಾಡುತ್ತಿರಬೇಕು.''

ಯಾವಾಗದರೊಮ್ಮೆ ಬಹಳಷ್ಟು ಸಾಧನೆ ಮಾಡುವುದಕ್ಕಿಂತ ಅಲ್ಪ ಪ್ರಮಾಣದಲ್ಲಿಯೇ ಆಗಲಿ, ಪ್ರತಿನಿತ್ಯ ನಿಯಮದಿಂದ ನಿಶ್ಚಿತವಾದ ಸಮಯದಲ್ಲಿ, ಸಾಧ್ಯವಾದರೆ ನಿಶ್ಚಿತ ಸ್ಥಳದಲ್ಲಿ ಭಗವ ನ್ನಾಮದ ಸಾಧನೆ ಮಾಡಿದರೆ, ಅದು ವಿಶೇಷ ಪರಿಣಾಮಕಾರಿ ಯಾಗುತ್ತದೆ ಎಂದು ಸಂತರ ವಾಣಿಯಿದೆ. ಭಕ್ತಿ ಭಂಡಾರಿ ಬಸವಣ್ಣನವರ ಒಂದು ವಚನವನ್ನು ಇಲ್ಲಿ ಸ್ಮರಿಸುವುದು ಉಚಿತ ವೆನಿಸುತ್ತದೆ. ಅವರು ಹೇಳುತ್ತಾರೆ:

ವಚನದಲ್ಲಿ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ॥
ಮನದಲ್ಲಿ ನಿಮ್ಮ ನೆನಹು ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ॥

**ಕೂಡಲ ಸಂಗಮದೇವ ದೇವ ನಿಮ್ಮ**
**ಚರಣಕಮಲದೊಳಗಾನು ತುಂಬಿ॥**

ಭಗವಂತನು ನಾರದರಿಗೆ ಹೇಳುತ್ತಾನೆ:

**ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ।**
**ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ॥**

''ಎಲೈ ನಾರದನೇ, ನಾನು ವೈಕುಂಠದಲ್ಲಿ ವಾಸಿಸುವುದಿಲ್ಲ, ಯೋಗಿಗಳ ಹೃದಯದಲ್ಲಿಯೂ ಇಲ್ಲ, ನನ್ನ ಭಕ್ತರು ಎಲ್ಲಿ (ನನ್ನನ್ನು ಕುರಿತು) ಭಜನೆ ಮಾಡುತ್ತಾರೆಯೋ ಅಲ್ಲಿರುತ್ತೇನೆ!''

ಭಕ್ತನು ಅನನ್ಯವಾಗಿ ನಿಶ್ಚಿಂತನಾಗಿ, ಸದಾ ಸರ್ವಭಾವದಿಂದಲೂ ಅವನನ್ನೇ ಭಜಿಸುತ್ತಿದ್ದರೆ ಅವನು ಬಹುಬೇಗ ಆವಿರ್ಭೂತನಾಗುತ್ತಾನೆ ಎಂದು ನಾರದರು ಹೇಳುತ್ತಾರೆ.

ಸಮರ್ಥ ರಾಮದಾಸರು ಹೇಳುತ್ತಾರೆ: ''ಭಕ್ತನು ಭಕ್ತಿಭಾವಗಳಿಂದಲೂ, ಶುದ್ಧಾಂತಃಕರಣದಿಂದಲೂ ಭಗವನ್ನಾಮವನ್ನು ಸ್ಮರಿಸುತ್ತಾ ಅತ್ಯಂತ ಪ್ರೇಮವುಕ್ಕಿ ಭಜನೆಯನ್ನು, ನಾಮದ ಗಾಯನವನ್ನು ಮಾಡುತ್ತಾನೆ. ಹೀಗೆ ಭಕ್ತನಿಗೆ ದೇವನ ಹುಚ್ಚುಹಿಡಿದರೆ, ದೇವನಿಗಾದರೂ ಭಕ್ತನ ಹುಚ್ಚು ಹಿಡಿಯುವುದು.''

''ಮಲಗಿ ಹಾಡಲು, ನಿಲುವ ನಾರಾಯಣ; ಕುಳಿತು ಕೀರ್ತನೆ ಮಾಡಿದರೆ ಡೋಲಾಯಮಾನನಾಗುವ. ನಿಂತು ನಾಮವನ್ನುಚ್ಚರಿಸಿದರೆ ಈ ಗೋವಿಂದ ಕುಣಿಯುತ್ತಾನೆ'' ಎಂದು ಸಂತ ತುಕಾರಾಮ ಹೇಳಿದಂತೆ ದೇವನು ಭಕ್ತನೊಡನೆಯೇ ಇರುವನು.

ಪುರಂದರದಾಸರಂತೂ,

**'ನೀನ್ಯಾಕೋ ನಿನ್ನ ಹಂಗ್ಯಾಕೋ ರಂಗ**
**ನಿನ್ನ ನಾಮದ ಬಲವೊಂದಿದ್ದರೆ ಸಾಕೋ'**

– ಎಂದು ಭಗವನ್ನಾಮದ ಮಹಿಮೆಯನ್ನು ಕೊಂಡಾಡಿದ್ದಾರೆ.

ಹೀಗೆ ಎಲ್ಲಾ ದೇಶಕಾಲಗಳಲ್ಲಿ ಆಗಿಹೋದ ಶ್ರೇಷ್ಠ ಸಂತರು ಜನಸಾಮಾನ್ಯರಿಗೆ ಆದರ್ಶಪ್ರಾಯರಾಗಿ ನಡೆದು ಜೀವನ ಸಾಫಲ್ಯವನ್ನು ಸಾಧಿಸುವುದು ಹೇಗೆಂದು ತೋರಿಸಿದರು. ಬಸವಾದಿ ಶರಣರು, ಪುರಂದರಾದಿ ದಾಸವರೇಣ್ಯರು, ತುಲಸೀದಾಸ, ಕಬೀರದಾಸ, ಸೂರದಾಸ, ಸಂತ ಜ್ಞಾನೇಶ್ವರ, ನಾಮದೇವ, ಏಕನಾಥ, ಸಂತ ತುಕಾರಾಮ, ಸಮರ್ಥರಾಮದಾಸ, ಬ್ರಹ್ಮಚೈತನ್ಯ ಗೋಂದಾವಲೇಕರ್ ಮುಂತಾಗಿ ಅನೇಕರು ಭಕ್ತಿಯ ಧ್ವಜವನ್ನೇರಿಸಿ, ಆತ್ಮಸಾಕ್ಷಾತ್ಕಾರದ ಮಾರ್ಗವನ್ನು ತಿಳಿಸಿದರು. ಇಂಥ ಸಂತಶ್ರೇಷ್ಠರು ಬೋಧಿಸಿದ ಮಾರ್ಗವನ್ನು ಅನುಸರಿಸಿ ಭಗವಂತನೆಡೆಗೆ ಅನನ್ಯವಾಗಿ ಶರಣುಹೋಗಿ, ಅಖಂಡವಾಗಿ ಅವನ ನಾಮದಲ್ಲಿ ಇದ್ದಿದ್ದಾದರೆ, ಮನುಷ್ಯನು ಈ ಜನ್ಮದಲ್ಲಿಯೇ ಜೀವನ್ಮುಕ್ತನಾಗುತ್ತಾನೆ. ಅವನಿಗೆ ಜಗವೆಲ್ಲವೂ ಬ್ರಹ್ಮಮಯ, ಭಗವನ್ಮಯವಾಗಿ ಕಾಣತೊಡಗುತ್ತದೆ. ✷

## ಯುವಚೇತನ



ಸತ್ಯ, ಪ್ರೇಮ ಮತ್ತು ನಿಷ್ಕಾಪಟ್ಯದ ಎದುರಿಗೆ ಯಾವುದೂ ನಿಲ್ಲಲಾರದು. ನೀನು ನಿಷ್ಕಪಟಿಯೆ? ಸಾಯುವವರೆಗೂ ಸ್ವಾರ್ಥರಹಿತನಾಗಿರುವೆಯಾ? ಪ್ರೀತಿಸುವೆಯಾ? ಹಾಗಿದ್ದರೆ ಭಯಪಡಬೇಡ. ಮೃತ್ಯುವಿಗೂ ಅಂಜಬೇಡ. ಮುಂದೆ, ನನ್ನ ಹುಡುಗರೆ! ಇಡೀ ಜಗತ್ತಿಗೆ ಇಂದು ಜ್ಞಾನಜ್ಯೋತಿ ಬೇಕಾಗಿದೆ. ಅದು ನಿರೀಕ್ಷಿಸುತ್ತಿದೆ! ಕೇವಲ ಭರತಖಂಡ ಮಾತ್ರ ಅದನ್ನು ಕೊಡಬಲ್ಲುದು. ಇಂದ್ರಜಾಲ, ಮಂತ್ರ, ತಂತ್ರ, ಬೂಟಾಟಿಕೆಗಳನ್ನಲ್ಲ. ನಿಜವಾದ ಧಾರ್ಮಿಕ ಚೈತನ್ಯದ ಮಾಹಾತ್ಮ್ಯೆಯನ್ನು, ಅತ್ಯುನ್ನತವಾದ ಆಧ್ಯಾತ್ಮಿಕ ಸತ್ಯಗಳನ್ನು ಭಾರತ ಕೊಡಬಲ್ಲುದು. ಅದಕ್ಕೇ ದೇವರು ಎಲ್ಲ ಸಂದಿಗ್ಧ ಸ್ಥಿತಿಗಳಿಂದಲೂ ಈ ಜನಾಂಗವನ್ನು ಇಂದಿನವರೆಗೂ ಕಾಪಾಡಿಕೊಂಡು ಬಂದಿದ್ದಾನೆ. ಈಗ ಸಕಾಲವಾಗಿದೆ. ನನ್ನ ಕೆಚ್ಚೆದೆಯ ಹುಡುಗರೇ, ನೀವೆಲ್ಲಾ ಮಹತ್ಕಾರ್ಯಗಳನ್ನು ಸಾಧಿಸಲು ಜನ್ಮವೆತ್ತಿದ್ದೀರಿ ಎಂಬುದರಲ್ಲಿ ವಿಶ್ವಾಸವಿಡಿ. ನಾಯಿಗಳ ಬೊಗಳುವಿಕೆ ನಮ್ಮನ್ನು ಹೆದರಿಸದಿರಲಿ. ಅಷ್ಟೇ ಏಕೆ, ಸ್ವರ್ಗದ ಸಿಡಿಲುಗಳಿಗೂ ಅಂಜಬೇಡಿ. ಎದ್ದೇಳಿ, ಕಾರ್ಯೋನ್ಮುಖರಾಗಿ!

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ೪.೧೭೭)*

ನಮಗೆ ಇಂದು ಬೇಕಾಗಿರುವುದೇ ಆತ್ಮನಿಗೆ ಸಂಬಂಧಪಟ್ಟ ಮಹಾಭಾವನೆ, ಅದರ ಅನಂತ ಶಕ್ತಿ, ಪರಿಶುದ್ಧತೆ ಮತ್ತು ಪರಿಪೂರ್ಣತೆ. ನನಗೆ ಒಂದು ಮಗುವಿದ್ದರೆ ಅದು ಹುಟ್ಟಿದಾಗಿನಿಂದಲೂ ಅದಕ್ಕೆ ''ನೀನು ಪರಿಶುದ್ಧಾತ್ಮ'' ಎಂದು ಹೇಳುತ್ತಿದ್ದೆ. ಪುರಾಣದಲ್ಲಿ ಬರುವ ರಾಣಿ ಮದಾಲಸೆಯ ಸುಂದರ ಕಥೆಯನ್ನು ನೀವು ಕೇಳಿರಬಹುದು. ಅವಳಿಗೆ ಮಗುವಾದ ತಕ್ಷಣವೇ ತೊಟ್ಟಿಲಲ್ಲಿ ಇಟ್ಟು ತೂಗುವಾಗ, ''ನೀನು ಪರಿಶುದ್ಧಾತ್ಮ, ಕಳಂಕರಹಿತ, ಪಾಪದೂರ, ಶಕ್ತಿಶಾಲಿ, ಪರಮಶ್ರೇಷ್ಠ'' ಎಂದು ಹಾಡುತ್ತಿದ್ದಳು. ಅದರಲ್ಲಿ ತುಂಬಾ ಸತ್ಯವಿದೆ. ನೀವು ಶ್ರೇಷ್ಠರೆಂದು ಭಾವಿಸಿ, ಶ್ರೇಷ್ಠರಾಗುವಿರಿ. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ೩.೧೨೦)* ✷

# ಆಧ್ಯಾತ್ಮಿಕ ಸಂಭಾಷಣೆ



## ಸ್ವಾಮಿ ಭೂತೇಶಾನಂದಜೀಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ

**ಪ್ರಶ್ನೆ:** ಮಹಾರಾಜರೆ, ಸ್ವಾಮಿ ವಿವೇಕಾನಂದರು ರಾಮಕೃಷ್ಣ ಮಹಾಸಂಘದ ಆದರ್ಶದ ಬಗ್ಗೆ ಹೇಳುವಾಗ, 'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ' ಎಂದು ಹೇಳಿದ್ದಾರೆ. ಶಾಸ್ತ್ರಗ್ರಂಥಗಳಲ್ಲಿ ಈ ವಿಚಾರ ಇದೆಯೆ? ಅವರು ಯಾವ ಗ್ರಂಥದಿಂದ ಇದನ್ನು ಉದ್ಧರಿಸಿದ್ದಾರೆ?

**ಮಹಾರಾಜ್:** ಸ್ವಾಮೀಜಿ ಉಚ್ಚರಿಸಿದ್ದೇ ಶಾಸ್ತ್ರ!

**ಪ್ರಶ್ನೆ:** ಅದನ್ನು ನಾವೂ ಒಪ್ಪುತ್ತೇವೆ, ಆದರೂ ಸ್ವಾಮೀಜಿ ಹೇಳಿದ ಎಷ್ಟೋ ವಿಚಾರಗಳು ಶಾಸ್ತ್ರಗಳಲ್ಲಿ ಸಿಗುತ್ತವೆ. ಅಂತೆಯೇ ಈ ವಾಕ್ಯ ಎಲ್ಲಾದರೂ ಸಿಗಬಹುದೆ?

**ಮಹಾರಾಜ್:** ಇದನ್ನು ಶಾಸ್ತ್ರವೆಂದು ಸರಿಯಾಗಿ ಹೇಳಲಾಗದು. ಆದರೆ ಆಚಾರ್ಯ ಶಂಕರರು ಹೇಳುತ್ತಾರೆ, **'ವಸಂತವಲ್ಲೋಕಹಿತಂ ಚರಂತಃ'** ಎಂದು.

**ಪ್ರಶ್ನೆ:** ಸ್ವಾಮೀಜಿ ಸಂನ್ಯಾಸಿಗಳ ಆದರ್ಶವಾಗಿ ಆತ್ಮೋದ್ಧಾರದ ಜೊತೆಗೆ, **ಜಗದ್ಧಿತ** ಎಂಬ ಎರಡನೇ ಸಂಗತಿಯನ್ನು ಸೇರಿಸಿದರು.

**ಮಹಾರಾಜ್:** 'ಜೊತೆಗೆ' ಅನ್ನಬೇಡ. ಅದು ಸಹಾನುಷ್ಠಾನ. ಎರಡರ ಮಹತ್ವವೂ ಕಡಿಮೆಯಲ್ಲ ; ಯಾವುದೂ ಹೆಚ್ಚಲ್ಲ.

**ಪ್ರಶ್ನೆ:** ಸ್ವಾಮೀಜಿಗೆ ಮೊದಲು ಸಂನ್ಯಾಸಿಗಳ ಜೀವನ, ಅವರ ಆದರ್ಶ ಹಾಗೂ ಗುರಿ ಎಂದರೆ ಆತ್ಮಸಾಕ್ಷಾತ್ಕಾರ ಮಾತ್ರ. ಸ್ವಾಮೀಜಿ ಈ **ಜಗತ್-ಹಿತ** ಎಂಬುದನ್ನು ಏಕೆ ಸೇರಿಸಿದರು?

**ಮಹಾರಾಜ್:** ಸ್ವಾಮೀಜಿ ಗಮನಿಸಿದರು, ಸಂನ್ಯಾಸಿಗಳು ಆತ್ಮಸಾಕ್ಷಾತ್ಕಾರದ ಹೆಸರಿನಲ್ಲಿ ಸ್ವಾರ್ಥಪರರೂ, ಸೋಮಾರಿಗಳೂ ಆಗಿ, ನಿರ್ದಯಿಗಳಾಗಿ ಜೀವನ ಸಾಗಿಸುತ್ತಿದ್ದರು. ಇದರಿಂದ ಆತ್ಮ ಸಾಕ್ಷಾತ್ಕಾರವೂ ಆಗುತ್ತಿಲ್ಲ , ಇತರರಿಗೆ ಉಪಕಾರವೂ ಆಗುತ್ತಿಲ್ಲ. ಸ್ವಾರ್ಥ ಉದ್ಭವಿಸುವುದೇ ಸಂಕುಚಿತತೆಯಿಂದ. ಮನಸ್ಸಿನ ಮಾಲಿನ್ಯವೇ ಸ್ವಾರ್ಥ. ಚಿತ್ತಶುದ್ಧಿಯು ಆತ್ಮಜ್ಞಾನಕ್ಕೆ ಪೀಠಿಕೆ. ಚಿತ್ತಶುದ್ಧಿ ಉಂಟಾಯಿತೆಂದರೆ ಸ್ವಾರ್ಥಪರತೆ ಹೊರಟುಹೋಗುತ್ತದೆ. **ಜಗದ್ಧಿತ** – ಇದನ್ನು ಪ್ರಾರಂಭದಲ್ಲಿ ಶ್ರೀರಾಮಕೃಷ್ಣರ ಕೆಲವು ಶಿಷ್ಯರೇ ಒಪ್ಪಿರಲಿಲ್ಲ. ಸ್ವಾಮೀಜಿ ಇದಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದರು, ಅವರನ್ನು ಒಪ್ಪಿಸಿದರು. 'ರಾಮಕೃಷ್ಣ ವಚನವೇದ' ಓದುವಾಗ ಕೆಲವೊಮ್ಮೆ ಜಗತ್ತು ಗೌಣವೆಂದು ಮನಸ್ಸಿಗೆ ಅನ್ನಿಸುತ್ತದೆ. ಪರಮಹಂಸರು ಹೇಳುತ್ತಿದ್ದರು, ಜಗತ್ತಿಗೆ ಉಪಕಾರ ಮಾಡಲು ಅದೇನು ಅಂಗೈ ಅಗಲವೆ? ಈ ವಾಕ್ಯಗಳ ಅರ್ಥವನ್ನು context (ಸಂದರ್ಭ) ನೋಡಿಕೊಂಡು ತಿಳಿದುಕೊಳ್ಳಬೇಕಾಗುತ್ತದೆ.

**ಪ್ರಶ್ನೆ:** ಚಿತ್ತಶುದ್ಧಿಗಾಗಿ **'ಜಗದ್ಧಿತ'** ಎಂಬ ಈ ವ್ಯವಸ್ಥೆ ಸಹಾಯ ಮಾಡುವುದೆ?

**ಮಹಾರಾಜ್:** ಬರೀ ಚಿತ್ತಶುದ್ಧಿಗಾಗಿ ಮಾತ್ರವಲ್ಲ, ಇದಕ್ಕೆ ಆತ್ಮಸಾಕ್ಷಾತ್ಕಾರಕ್ಕೆ ಎಷ್ಟು ಮಹತ್ವವಿದೆಯೋ, ಅಷ್ಟೇ ಜಗದ್ಧಿತಕ್ಕೂ ಮಹತ್ವವಿದೆ.

**ಪ್ರಶ್ನೆ:** ಮಹಾರಾಜರೆ, ಚಿತ್ತಶುದ್ಧಿಯಾದರೆ ಆತ್ಮಸಾಕ್ಷಾತ್ಕಾರವಾದ ಹಾಗೆಂದು ತಾವು ಹೇಳುತ್ತಿದ್ದೀರಿ. ಅಂದರೆ ಎರಡೂ ಒಂದೇ ಎಂದ ಹಾಗಾಯಿತು.

**ಮಹಾರಾಜ್:** ಚಿತ್ತಶುದ್ಧಿ ಮತ್ತು ಜಗದ್ಧಿತ. ಜಗದ್ಧಿತದ ಮೂಲಕ ಚಿತ್ತಶುದ್ಧಿ – ಈ ಮಾತು ಸರಿಯಲ್ಲ. ಆತ್ಮಸಾಕ್ಷಾತ್ಕಾರ ಹಾಗೂ ಜಗದ್ಧಿತ ಇವೇ ಆದರ್ಶ. ಎರಡೂ ಆದರ್ಶವೆ, ಇದನ್ನು ನೆನಪಿಟ್ಟುಕೋ.

**ಪ್ರಶ್ನೆ:** ಮುಕ್ತಿ ನಮ್ಮ ಗುರಿಯಾಗಿರುವಾಗ ಜಗದ್ಧಿತ ಮಾರ್ಗವಲ್ಲವೆ? ಅದನ್ನೇ ನಾವು ಸಾಧನೆ ಎನ್ನುತ್ತೇವೆ.

**ಮಹಾರಾಜ್:** ಮುಕ್ತಿ ಮಾತ್ರ ಗುರಿ ಎಂದು ಯಾರು ಹೇಳಿದರು?

**ಪ್ರಶ್ನೆ:** ಜೀವಾತ್ಮನ ಗುರಿಯೇನು? ಪರಮಾತ್ಮನಲ್ಲಿ ಅದು ಅಭಿನ್ನತೆಯನ್ನು ಹೊಂದುವುದು, ಐಕ್ಯಾನುಭವ ಅಥವಾ ಮುಕ್ತಿ ತಾನೆ?

**ಮಹಾರಾಜ್:** ಶ್ರೀರಾಮಕೃಷ್ಣರು ಸ್ವಾಮೀಜಿಗೆ ಗದರಿಸಲಿಲ್ಲವೆ? ಮುಕ್ತಿಯೇ ಗುರಿಯಾಗಿರುತ್ತಿದ್ದರೆ, ಈ ಗದರಿಸುವಿಕೆಗೆ ಅರ್ಥವೇನು? ಉಚ್ಚ ಅವಸ್ಥೆ ಯಾವುದು? ನಿರ್ವಿಕಲ್ಪ ಸಮಾಧಿಗಿಂತಲೂ ಉಚ್ಚಾವಸ್ಥೆ ಇದೆಯೆಂದು ಪರಮಹಂಸರು ಹೇಳಲಿಲ್ಲವೆ? ಆ ಅವಸ್ಥೆಯೇ ಸರ್ವಭೂತಗಳಲ್ಲಿಯೂ ಬ್ರಹ್ಮದರ್ಶನ ಮಾಡುವುದು ಮತ್ತು ಅವುಗಳ ಸೇವೆ ಮಾಡುವುದು.

**ಪ್ರಶ್ನೆ:** ಕರ್ಮಯೋಗ ಅಥವಾ ಜಗದ್ಧಿತವೇ ನಮ್ಮ ಸಾಧನೆ ಎಂದೇ ನಾವು ಹೇಳುತ್ತಿರುವುದು.

**ಮಹಾರಾಜ್:** ಅದು ಗುರಿ. ಆತ್ಮ ಸಾಕ್ಷಾತ್ಕಾರವೂ ಗುರಿ, ಅಂತೆಯೇ ಜಗದ್ಧಿತವೂ ಗುರಿ.

**ಪ್ರಶ್ನೆ:** ಎರಡೂ ಒಂದೇ ಹೇಗೆ? ಎರಡೂ ಸಮಾನವೆಂದು ಹೇಳಿದಿರಿ. ಎರಡೂ ಮಹತ್ವಪೂರ್ಣವೆಂದೂ ಹೇಳಿದಿರಿ. ಎರಡರ ಗುರಿ ಒಂದೇ ಆದರೂ, ಎರಡೂ ಬೇರೆ ಬೇರೆ ಅಲ್ಲವೆ?

**ಮಹಾರಾಜ್:** ಎರಡೂ ಒಂದೇ ಅಲ್ಲ; ಬೇರೆ ಬೇರೆ. ಕೆಲವರು ಜಗತ್ತಿನ ಹಿತ ಮಾಡಲು ಪ್ರಯತ್ನ ಮಾಡುವರು, ಆದರೆ ಆತ್ಮಸಾಕ್ಷಾತ್ಕಾರಕ್ಕೆ ಗಮನ ಕೊಡುವುದಿಲ್ಲ. ಇನ್ನು ಕೆಲವರು ಬರಿ ಆತ್ಮ ಸಾಕ್ಷಾತ್ಕಾರದ ಕಡೆಗೆ ಮಾತ್ರ ಗಮನ ಕೊಡುವರು, ಜಗದ್ಧಿತದ ಬಗ್ಗೆ ಪ್ರಯತ್ನ ಮಾಡರು. ಸ್ವಾಮೀಜಿ ಹೇಳುತ್ತಾರೆ, ಎರಡಕ್ಕೂ ಸಮಾನ ಆದ್ಯತೆ ಕೊಡಬೇಕು. ಎರಡು ಪದಗಳ ಕೊನೆಯಲ್ಲಿ 'ಚ' ಎಂಬುದರ ಅರ್ಥ 'ಕೂಡ' – ಎಂದರೆ ಎರಡನ್ನೂ ಸಮಾನವಾಗಿ ತೆಗೆದುಕೊಳ್ಳಬೇಕು ಎಂದರ್ಥ. ಆತ್ಮಸಾಕ್ಷಾತ್ಕಾರಕ್ಕಾಗಿ ಪ್ರಯತ್ನ, ಜೊತೆಗೆ ಜಗದ್ಧಿತ ಮಾಡೋಣ.

**ಪ್ರಶ್ನೆ:** ಎರಡನೆಯದರಲ್ಲಿ ಯಾವುದೇ ಆಧ್ಯಾತ್ಮಿಕ ಭಾವ ಇಲ್ಲದಿರಬಹುದು, ಪ್ರಾಪಂಚಿಕ ಉದ್ದೇಶಕ್ಕಾಗಿ ಎಷ್ಟೋ ಜನ ಜಗದ್ಧಿತ ಮಾಡಲು ಪ್ರಯತ್ನಿಸುತ್ತಿದ್ದಾರೆ.

**ಮಹಾರಾಜ್:** ಹೌದು, ಅದಕ್ಕಾಗಿಯೇ ಸ್ವಾಮೀಜಿ ಹೇಳುವುದು, ಜಗದ್ಧಿತದ ಜೊತೆಗೆ ಆತ್ಮನ ಮುಕ್ತಿ ಕೂಡ, ಮತ್ತು ಎರಡಕ್ಕೂ ಸಮಾನ ಆದ್ಯತೆ ಕೊಡಲಾಗುತ್ತದೆ.

**ಪ್ರಶ್ನೆ:** ನಾವು ಜಗದ್ಧಿತದ ಕೆಲಸಗಳಲ್ಲಿ ತೊಡಗಿಸಿಕೊಂಡಾಗ, ಮುಕ್ತಿಯ ವಿಚಾರ ನಮ್ಮ ಮನಸ್ಸಿನಲ್ಲಿ ಇರುವುದಿಲ್ಲವೆ? ಮುಕ್ತಿಯ ವಿಚಾರ ಮನಸ್ಸಿನಲ್ಲಿಟ್ಟುಕೊಂಡು –

**ಮಹಾರಾಜ್:** ಈಗ ಅದರ ತದ್ವಿರುದ್ಧ ಹೇಳುತ್ತೇನೆ, ಮುಕ್ತಿಗಾಗಿ ನೀನು ಪ್ರಯತ್ನ ಮಾಡುವಾಗ ಜಗದ್ಧಿತ ನಿನ್ನ ಮನಸ್ಸಿನಲ್ಲಿರಲಾರದೆ?

**ಪ್ರಶ್ನೆ:** ಅನೇಕ ವೇಳೆ ಇರಲಾರದು. ಸ್ವಾರ್ಥ ಮನಸ್ಸಿನೊಳಗೆ ಬಂದು ಬಿಡುತ್ತದೆ. ಬರಿ ತನ್ನ ಮುಕ್ತಿಗಾಗಿಯೇ ಪ್ರಯತ್ನವಾಗುತ್ತದೆ.

**ಮಹಾರಾಜ್:** ಹಾಗೇನೇ, ಜಗದ್ಧಿತ ಮಾಡುವಾಗ, ಆತ್ಮ ಸಾಕ್ಷಾತ್ಕಾರ ಕುರಿತು ಸಮಾನಭಾವದ ಆಲೋಚನೆ ಮನಸ್ಸಿನಲ್ಲಿ ಬರುವುದಿಲ್ಲ.

**ಪ್ರಶ್ನೆ:** ಸರಿ. ಒಂದು ವೇಳೆ ಎರಡೂ ಬೇರೆ ಬೇರೆ ಆಗಿದ್ದರೆ –

**ಮಹಾರಾಜ್:** ಎರಡೂ ಬೇರೆ ಎಂದರೆ – ಎರಡನ್ನೂ ಒಂದುಗೂಡಿಸಬೇಕು. ಪ್ರತ್ಯೇಕವೆಂದರೆ, ಯಾವುದಾದರೂ ಒಂದನ್ನು ಮಾಡಿ ಬಿಡುವುದಲ್ಲ, ಎರಡಕ್ಕೂ ಸಮಾನ ಆದ್ಯತೆ ನೀಡಬೇಕು.

**ಪ್ರಶ್ನೆ:** ಅಂದರೆ ಎರಡೂ ಗುರಿಯೇ. ಒಂದು ಗುರಿ, ಇನ್ನೊಂದು ಮಾರ್ಗವೆಂದಲ್ಲ. ಸ್ವಾಮೀಜಿ ಹೇಳುವುದೂ ಅದನ್ನೇ.

**ಮಹಾರಾಜ್:** ಒಂದು ಮುಖ್ಯ, ಇನ್ನೊಂದು ಗೌಣ ಎಂದೂ ಅಲ್ಲ. 'ಶ್ರೀರಾಮಕೃಷ್ಣ ವಚನವೇದ' ಪರಾಮರ್ಶಿಸಿದಾಗ, ಆತ್ಮ ಸಾಕ್ಷಾತ್ಕಾರವೇ ನಮ್ಮ ಗುರಿ ಎಂದು ಅನಿಸುತ್ತದೆ. ಸ್ವಾಮೀಜಿ ಮಾತಿಗೆ ಆದ್ಯತೆ ಕೊಡಬೇಕೇ, ಪರಮಹಂಸರ ಮಾತಿಗೆ ಒತ್ತು ನೀಡಬೇಕೆ? ಇದೇ ಸಂದಿಗ್ಧತೆ.

**ಪ್ರಶ್ನೆ:** ಆ ಸಿದ್ಧಾಂತ ಈಗ ಮುಗಿದ ಅಧ್ಯಾಯ. ಈಗ ಸ್ವಾಮೀಜಿ ವಿಚಾರವನ್ನೇ ಎಲ್ಲರೂ ಸ್ವೀಕರಿಸಿದ್ದಾರೆ.

**ಮಹಾರಾಜ್:** ಹಾಗೆಂದರೆ? ಸಿದ್ಧಾಂತ ಮುಗಿದುಹೋಯಿತೆ? ಈಗಲೂ ನಮ್ಮಲ್ಲಿ ಎಷ್ಟು ಜನರ ಮನಸ್ಸಿನಲ್ಲಿ..

**ಪ್ರಶ್ನೆ:** ಎರಡನೆಯದು – ಅಂದರೆ **ಜಗದ್ಧಿತ**, ನಮ್ಮಲ್ಲಿ ಎಷ್ಟೋ ಜನರಿಗೆ ಗೌಣವಾಗಿಬಿಟ್ಟಿದೆ. ಅದು ಚಿತ್ತಶುದ್ಧಿಗೆ ಒಂದು ಮಾರ್ಗ ಮತ್ತು ಸಾಧನೆ – ಎಂದೇ ಇವನ್ನು ನಾವು ತಿಳಿದುಕೊಂಡಿದ್ದೇವೆ. ಜಗದ್ಧಿತವೆಂದರೆ ಒಂದು by-product; ಭಗವತ್ಸಾಕ್ಷಾತ್ಕಾರಕ್ಕಾಗಿ, ಮುಕ್ತಿಗಾಗಿ ಪ್ರಯತ್ನಪಟ್ಟರೆ ಅದರೊಂದಿಗೇ ಜಗದ್ಧಿತವೂ ಆಗಿಬಿಡುವುದು – ಹೀಗೆ ಒಂದು ಅಭಿಪ್ರಾಯವಿದೆ.

**ಮಹಾರಾಜ್:** ಅದೇನೋ ಇದೆ.

**ಪ್ರಶ್ನೆ:** ಅದು ಸ್ವಾಮೀಜಿ ಅಭಿಪ್ರಾಯವಾಗಿತ್ತೆ?

**ಮಹಾರಾಜ್:** ಹೌದು, ಸ್ವಾಮೀಜಿಯವರ ಅಭಿಪ್ರಾಯ ಹಾಗಿತ್ತು. ಅವರು 'ಒಂದು ಗುಹೆಯಲ್ಲಿ ಕುಳಿತುಕೊಂಡು ಒಬ್ಬ ಸದ್–ವಿಚಾರ (ಭಗವಚ್ಚಿಂತನ) ಮಾಡಿದರೆ ಆ ಆಲೋಚನಾ ತರಂಗ, ಗುಹೆಯ ಗೋಡೆಯನ್ನು ಭೇದಿಸಿ ಜಗತ್ತನ್ನೆಲ್ಲ ಪಸರಿಸುವುದು' ಎನ್ನುತ್ತಿದ್ದರು.

**ಪ್ರಶ್ನೆ:** ನಮ್ಮ ಆದರ್ಶದ ಬಗ್ಗೆ motto(ಧ್ಯೇಯ) ಏನೆಂದು ಎಲ್ಲವನ್ನೂ ನಿರ್ಧರಿಸುವಾಗ –

**ಮಹಾರಾಜ್:** ಪ್ರಾರಂಭದಲ್ಲಿಯೇ ನಾವು ಅದನ್ನು ಒಂದು ಮಾಡಲು ಮನಸ್ಸು ಮಾಡಿದ್ದರೆ, ಅದು ತಪ್ಪಾಗಿಬಿಡುತ್ತಿತ್ತು .

**ಪ್ರಶ್ನೆ:** ಅದಕ್ಕೆ ವಿರುದ್ಧವಾಗಿ ಸ್ವಾಮೀಜಿ ಹೇಳುತ್ತಾರೆ ಕೂಡ: ಅವರು ವಿರಜಾನಂದರಿಗೆ ಹೇಳಿದ್ದರು, ''ನೀನೇನಾದರೂ ನಿನ್ನ ಸ್ವಂತ ಮುಕ್ತಿಯನ್ನು ಬಯಸಿದರೆ ನರಕಕ್ಕೆ ಹೋಗುವೆ ನೋಡು'' ಎಂದು.

**ಮಹಾರಾಜ್:** ಯಾಕೆ ಹಾಗೆಂದರು ಗೊತ್ತೆ? ಅದಕ್ಕೂ ಕಾರಣವಿದೆ, ಜನರ ಪ್ರವೃತ್ತಿ ಆ ಕಡೆಗೇ ಆಗಿರುವುದರಿಂದ. ಮುಕ್ತಿ ಎಂದರೆ ಕಣ್ಣು ಮುಚ್ಚಿ ಕುಳಿತುಕೊಳ್ಳುವುದಲ್ಲ.

**ಪ್ರಶ್ನೆ:** ಆದರೂ ಜಗದ್ಧಿತಕ್ಕಾಗಿಯೇ ಕೆಲಸ ಮಾಡುವಾಗ, ಅದನ್ನು ನಮ್ಮ ಸಾಧನೆಯ ದೃಷ್ಟಿಯನ್ನು ಗಮನಕ್ಕೆ ತಂದುಕೊಳ್ಳದಿದ್ದರೆ, ಇನ್ನು ಯಾವ ಭಾವದಿಂದ, ಯಾವ ದೃಷ್ಟಿಯಿಂದ ಕೆಲಸ ಮಾಡಬೇಕು?

**ಮಹಾರಾಜ್:** ಸಾಧನೆಯ ದೃಷ್ಟಿಯಿಂದ ನೋಡದಿದ್ದರೆ ಅದರ ಉದ್ದೇಶವೇ ವ್ಯರ್ಥವಾಗುವುದು.

**ಪ್ರಶ್ನೆ:** ಅಂದರೆ ಉದ್ದೇಶ ಪುನಃ ಮುಕ್ತಿಯೆಂದೇ ಆಗುವುದು.

**ಮಹಾರಾಜ್:** ಅದನ್ನೇ ನಾನಂದೆನಲ್ಲ! ಮುಕ್ತಿಯ ಬಗ್ಗೆ ಪ್ರಜ್ಞೆ ಇಲ್ಲದಿದ್ದರೆ ಮುಕ್ತನಾಗಲು ಸಾಧ್ಯವೇ ಇಲ್ಲ.

**ಪ್ರಶ್ನೆ:** ಒಂದು ಆಧ್ಯಾತ್ಮಿಕ ಭಾವದೊಂದಿಗೆ ಕೆಲಸ ಮಾಡುವಾಗ ಮುಕ್ತಿಯ ವಿಚಾರವೂ ಜೊತೆಗಿರುತ್ತದೆ.

**ಮಹಾರಾಜ್:** ಮುಕ್ತಿ ಲಭಿಸಿಯೇ ತೀರುವುದು. ಆದರೆ ನಮ್ಮ ಮುಕ್ತಿಯಷ್ಟೇ ಸಾಲದು. ಜಗತ್ತಿನ ಕಲ್ಯಾಣದ ಬಗೆಗೂ ನಮ್ಮಲ್ಲಿ ಪ್ರಜ್ಞೆಯಿರಬೇಕು. ಸ್ವಾಮೀಜಿ ಇದನ್ನೇ ಹೇಳಿರುವುದು.

**ಪ್ರಶ್ನೆ:** ನನ್ನ ಮುಕ್ತಿ, ಉಳಿದವರ ಮುಕ್ತಿ – ಇದಕ್ಕೆ ಪ್ರಯತ್ನ ಮಾಡುವಾಗ ಅದರ ಉದ್ದೇಶ ಒಂದೇ ಆಗುವುದಿಲ್ಲವೆ?

**ಮಹಾರಾಜ್:** ಹಾಗೆ ಆಗುವುದಿಲ್ಲ.

**ಪ್ರಶ್ನೆ:** ಜಗತ್ತಿನ ಹಿತ ಒಂದು ವೇಳೆ ಇತರರ ಮುಕ್ತಿಗೂ ಕಾರಣವಾದರೆ, ಉದ್ದೇಶ ಒಂದೇ ಆಯಿತು.

**ಮಹಾರಾಜ್:** ಮುಕ್ತಿ ಮತ್ತು ಹಸಿದವರಿಗೆ ಅನ್ನ ನೀಡುವುದು ಒಂದೆಯೆ? ಬ್ರಹ್ಮಸತ್ಯ, ಜಗನ್ಮಿಥ್ಯಾ ಎಂದು ತಿಳಿದೂ ಜಗದ್ಧಿತಕ್ಕಾಗಿ ಪ್ರಯತ್ನ ಮಾಡಬೇಕು. ಯಾರಿಗಾಗಿ ಮಾಡುತ್ತಿದ್ದೇನೋ ಅದರ ಪ್ರಯೋಜನ ಇದ್ದೇ ಇದೆ. ಅದರಿಂದಾಗಿ ಜ್ಞಾನ ಅಥವಾ ಮುಕ್ತಿ–ಭಾವಕ್ಕೆ ಯಾವ ತಡೆಯೂ ಬರುವುದಿಲ್ಲ. ಶ್ರೀರಾಮಕೃಷ್ಣರ 'ಹಸಿದ ಹೊಟ್ಟೆಗೆ ಧರ್ಮಬೋಧೆ ನಡೆಯದು' ಎನ್ನುವ ಮಾತಿನಲ್ಲಿ ಎಲ್ಲ ಅರ್ಥವನ್ನೂ ಕಂಡುಕೊಳ್ಳಬಹುದು. ಸ್ವಾಮೀಜಿ ಮತ್ತು ಶ್ರೀರಾಮಕೃಷ್ಣರ ಮಾತುಗಳಲ್ಲಿ ವಿರುದ್ಧ ಭಾವನೆ ಇಲ್ಲ. ✶

# ಯೋಗವಾಸಿಷ್ಠದ ಕಥೆಗಳು

ಸ್ವಾಮಿ ವೀರೇಶಾನಂದ

ಕಥಾಗುಚ್ಛ - ೩



## ಉತ್ಪತ್ತಿ ಪ್ರಕರಣ

(ಭಾಗ ೧)

ವಸಿಷ್ಠರು ರಾಮಚಂದ್ರನಿಗೆ ತಾವು ಮಾಡುತ್ತಿರುವ ಉಪದೇಶವನ್ನು ಮುಂದುವರೆಸುತ್ತಿದ್ದಾರೆ : ''ರಾಮ, ಸೃಷ್ಟಿಯ ರಹಸ್ಯವನ್ನು ನಾನು ಈಗ ವಿವರಿಸುತ್ತೇನೆ. ಅದೇನು ಗೊತ್ತೆ? ಸೃಷ್ಟಿ ಇರುವುದು ಬಂಧನದ ಸ್ಥಿತಿಯಲ್ಲಿ ಮಾತ್ರವೇ. ಮುಕ್ತಿಯಲ್ಲಿ ಸೃಷ್ಟಿಯೇ ಇಲ್ಲ, ಈ ಜಗತ್ತು ಅನುಭವಕ್ಕೆ ಬರುವುದೇ ಇಲ್ಲ. ಈ ಸೃಷ್ಟಿಯಲ್ಲಷ್ಟೇ ಹುಟ್ಟುವುದು, ಬೆಳೆಯುವುದು, ಜೀರ್ಣವಾಗುವುದು ಮತ್ತು ಮರಣ ಹೊಂದುವುದು, ಸ್ವರ್ಗ ಅಥವಾ ನರಕಕ್ಕೆ ಹೋಗುವುದು ಮುಂತಾದವುಗಳು ಇವೆ. ಮುಕ್ತಸ್ಥಿತಿಯಲ್ಲಿ ಅದಾವುದೂ ಇಲ್ಲ.

''ರಾಮ, ಇನ್ನೊಂದು ಸೂಕ್ಷ್ಮವನ್ನು ಹೇಳುತ್ತೇನೆ, ಕೇಳು. ಈ ಸೃಷ್ಟಿ ನಿಜವಾದದ್ದಾದರೆ, ಅದರ ನಾಶವು ಎಂದಿಗೂ ಸಾಧ್ಯವಾಗದು. ಇದೇ ಶಾಶ್ವತ ಸತ್ಯ : ಅಸತ್ಯವು ಅಸ್ತಿತ್ವವನ್ನು ಎಂದಿಗೂ ಪಡೆದುಕೊಳ್ಳುವುದಿಲ್ಲ ; ಸತ್ಯವು ಎಂದಿಗೂ ವಿನಾಶವಾಗದು.

''ಈ ಜಗತ್ತಿನ ಅನುಭವ ಯಾವ ರೀತಿ ಗೊತ್ತೆ? ಸ್ವಪ್ನದ ಅನುಭವದಂತೆ. ಈ ವಿಷಯವಾಗಿ ಒಂದು ಕಥೆ ಹೇಳುತ್ತೇನೆ ಕೇಳು.''

### ಆಕಾಶಜನ ಕಥೆ

ಆಕಾಶಜ ಎಂಬ ಒಬ್ಬ ಮಹಾತ್ಮರಿದ್ದರು. ಆಕಾಶಜ ಎಂದರೆ ಆಕಾಶದಿಂದ ಹುಟ್ಟಿದವರು ಎಂದರ್ಥ. ಅವರು ಲೋಕಕಲ್ಯಾಣಕ್ಕಾಗಿ ನಿರಂತರವಾಗಿ ಧ್ಯಾನ ಮಾಡುತ್ತಿದ್ದರು. ಬಹಳ ವರ್ಷಗಳ ನಂತರ, ಯಮನ ಬಂಟನು ಅವರನ್ನು ಕರೆದೊಯ್ಯುವುದಕ್ಕೆ ಬಂದನು. ಆದರೆ ಅವರ ಹತ್ತಿರ ಕೂಡ ಹೋಗಲು ಅವನಿಗೆ ಸಾಧ್ಯವಾಗಲಿಲ್ಲ. ಮಹಾತ್ಮರ ಸುತ್ತಲೂ ಅಗ್ನಿಚಕ್ರವು ಸುತ್ತುವರೆದಿತ್ತು. ಅದು ಅವರನ್ನು ಕಾಪಾಡುತ್ತಲಿತ್ತು. ಎಷ್ಟು ಪ್ರಯತ್ನಪಟ್ಟರೂ ಮಹಾತ್ಮರನ್ನು ತನ್ನ ಪಾಶಕ್ಕೆ ಸಿಕ್ಕಿಸಲು ಯಮಬಂಟನಿಗೆ ಸಾಧ್ಯವಾಗಲೇ ಇಲ್ಲ. ಕಡೆಗೆ ಅವನು ನಿರಾಶನಾಗಿ ಯಮನ ಹತ್ತಿರ ಹಿಂತಿರುಗಿ ಬಂದನು. ತನ್ನ ಒಡೆಯನ ಮುಂದೆ ತನ್ನ ಅಚ್ಚರಿಯನ್ನೂ, ನಿಸ್ಸಹಾಯಕತೆಯನ್ನೂ ಹೀಗೆ ತೋಡಿಕೊಂಡನು: ''ಭಗವನ್, ಈತನನ್ನು ಕಟ್ಟುಹಾಕಿ ಕರೆತರಲು ನನಗೆ ಸಾಧ್ಯವಾಗಲೇ ಇಲ್ಲ, ಇದಕ್ಕೆ ಕಾರಣವೇನೆಂದು ತಿಳಿಸುವಿರಾ?'' ಅದಕ್ಕೆ ಯಮನು ಉತ್ತರವಿತ್ತನು: ''ನೋಡು, ಒಂದು ವಿಷಯವನ್ನು ನೀನು ತಿಳಿದುಕೊಳ್ಳಬೇಕು. ನೀನು ಯಾರನ್ನೂ ನಿಜವಾಗಿಯೂ ಕೊಲ್ಲಲು ಸಾಧ್ಯವೇ ಇಲ್ಲ, ತಿಳಿಯಿತೆ? ಮೃತ್ಯು ಉಂಟಾಗುವುದು ಅವರವರ ಕರ್ಮಗಳ ಅನುಸಾರವಾಗಿ. ವ್ಯಕ್ತಿಯೊಬ್ಬನ ಕರ್ಮಫಲವೇ ಮೃತ್ಯುವಾಗಿ ಪರಿಣಮಿಸುವುದು. ಆದ್ದರಿಂದ ಅವನ ಕರ್ಮಗತಿಯನ್ನು ತಿಳಿದು ಬಾ.''

ಇದರಂತೆಯೇ ಬಂಟನು ಆಕಾಶಜನ ಕರ್ಮಗತಿಯನ್ನು ಅರಿಯಲು ಪ್ರಯತ್ನಿಸಿದನು. ಅವನಿಗೆ ಅದು ಸಾಧ್ಯವಾಗಲೇ ಇಲ್ಲ. ಈ ವಿಚಿತ್ರ ಸಂಗತಿಯ ಬಗ್ಗೆ ಕೂಡ ಅವನು ಯಮನಿಗೆ ವರದಿಯೊಪ್ಪಿಸಿದನು. ಅದಕ್ಕೆ ಯಮನು ಹೀಗೆಂದನು: ''ಅಯ್ಯಾ, ಆಕಾಶಜನು ನಿಜಕ್ಕೂ ಆಕಾಶದಿಂದಲೇ ಹುಟ್ಟಿದವನು. ಅವನು ಆಕಾಶದಷ್ಟು ಪರಿಶುದ್ಧನು. ಹೀಗಾಗಿ ಅವನು ಕರ್ಮಬಂಧನದಿಂದ ಸರ್ವದಾ ಮುಕ್ತನು. ಹೀಗಾಗಿ ಹುಟ್ಟಿದ್ದರೂ ಅವನು ಅಜಾತನೇ; ಏಕೆಂದರೆ ಹಿಂದಿನ ಜನ್ಮದಲ್ಲಿಯೂ ಅವನು ಯಾವುದೇ ಕರ್ಮವನ್ನು ಮಾಡಿದವನಲ್ಲ. ಇದರಿಂದಾಗಿ, ಅವನಿಗೆ ಕರ್ಮಸಂಕಲ್ಪಗಳನ್ನು ಮಾಡಲು ಬೇಕಾದ ಮನಸ್ಸೆಂಬ ಅಂತರಿಂದ್ರಿಯವೇ ಇಲ್ಲ. ಇದರ ಪರಿಣಾಮವಾಗಿ ಬರಿಯ ಮಾನಸಿಕ ಕರ್ಮವನ್ನೂ ಕೂಡ ಮಾಡಿದವನಲ್ಲ ಅವನು. ಆಕಾಶಜನು ಚೈತನ್ಯಮೂರ್ತಿಯಾಗಿದ್ದಾನೆ. ನಮ್ಮ ಕಣ್ಣಿಗೆ ಮಾತ್ರ ಶರೀರದ ಹಾಗೆ ಕಾಣಿಸಿಕೊಳ್ಳುತ್ತಿದ್ದಾನೆ, ಅಷ್ಟೆ.

''ಜಲದಲ್ಲಿ ದ್ರವತ್ವವು ಸಹಜವಾಗಿಯೇ ಇರುವಂತೆ, ಆಕಾಶದಲ್ಲಿ ನಿರ್ವಾತವು ನೈಸರ್ಗಿಕವಾಗಿಯೇ ತೋರುವಂತೆ, ಈ ಮಹಾತ್ಮನಲ್ಲಿ ಪರಮಚೈತನ್ಯ ಭಾವವಲ್ಲದೆ ಬೇರೇನೂ ಇಲ್ಲವೇ ಇಲ್ಲ ಎನ್ನಬೇಕು. ಕಾರಣವಿಲ್ಲದ ಮೂರ್ತರೂಪನು ಅವನು. ಹೀಗಾಗಿ ಅವನನ್ನು ಸ್ವಯಂಭೂ ಎಂದೇ ತಿಳಿಯಬೇಕು. 'ಮಣ್ಣಿನಿಂದ ಮಾಡಿದ ಈ ದೇಹವೇ ನಾನು' ಎಂಬ ತಪ್ಪುಭಾವನೆಯಿಂದ, ಜಡಜಗತ್ತಿಗೆ ದಾಸನಾಗಿರುವವನನ್ನು ನೀನು ಹಿಡಿದು ತರಬಲ್ಲೆ. ಆದರೆ ಈ ಮಹಾತ್ಮನಿಗೆ ಅಂಥ ಯಾವ ಭ್ರಮೆಯೂ ಇಲ್ಲ. ಶರೀರವಿದ್ದರೂ ಅಶರೀರನಾದ ಇವನು ನಿನ್ನ ಪರಿಧಿಗೆ ಮೀರಿದವನು.''

### ಲೀಲೆಯ ಕಥೆ

ಈ ಕಥೆಯನ್ನು ಹೇಳಿದ ನಂತರ ವಸಿಷ್ಠರು ಹೀಗೆ ನುಡಿಯುತ್ತಾರೆ: ''ಓ ರಾಮ, ಸೃಷ್ಟಿಕರ್ತನ ಮನಸ್ಸಿನ ಕಂಪನವೇ ಸೃಷ್ಟಿಯಾಗಿ ಮೈದಳೆದಿದೆಯಪ್ಪಾ. ಆ ಕಂಪನವು ಬರಿಯ ಆಲೋಚನೆ ಮಾತ್ರ. ಹೀಗಾಗಿ ಅದರಿಂದ ಸೃಷ್ಟಿಗೊಂಡ ಜೀವರಾಶಿಯೂ ಬರಿಯ ಆಲೋಚನಾತರಂಗ ಮಾತ್ರವೇ. ಆದರೂ ಅದು ನಿಜವೆಂದೇ ತೋರುತ್ತದೆ. ಇದು ಭ್ರಮೆಯಲ್ಲದೆ ಇನ್ನೇನು? ಸೃಷ್ಟಿಕರ್ತನಲ್ಲೂ

ಎರಡು ಸ್ವಭಾವಗಳಿವೆ. ಒಂದು ಪರಿಶುದ್ಧ ಚೈತನ್ಯ, ಇನ್ನೊಂದು ಅವನ ಮನಸ್ಸು. ಮೊದಲನೆಯದೇ ಸತ್ಯವಾದುದು. ಎರಡನೆಯದು ಅಸತ್ಯ. ಹೀಗಾಗಿ ಸೃಷ್ಟಿಕರ್ತನ ಮನಸ್ಸಿನ ಆಲೋಚನಾ ರೂಪವಾದ ಈ ಜಗತ್ತೂ ಭ್ರಮಾರೂಪವಾದದ್ದೇ ಆಗಿರುತ್ತದೆ.

''ಚೈತನ್ಯದಲ್ಲಿ ಮೂಡಿಬರುವ ಪ್ರತಿಯೊಂದು ಆಲೋಚನೆಯೂ ಒಂದು ರೂಪವನ್ನು ತಾಳುತ್ತದೆ. ನಿಜವಾಗಿಯೂ ಇವೆಲ್ಲವೂ ಚೈತನ್ಯಮಯವೇ ಆಗಿವೆ; ಅವುಗಳ ಭೌತಿಕ ರೂಪಗಳೆಂಬುದು ಬರಿಯ ಕಣ್ಕಟ್ಟು ಮಾತ್ರ. ಇದರ ರಹಸ್ಯವಿಷ್ಟೇ: ಸೃಷ್ಟಿ ಎಂಬ ಕ್ರಿಯೆ ನಡೆಯುವುದು ಸೃಷ್ಟಿಕರ್ತನ ಮನಸ್ಸಿನಲ್ಲಿ ಮಾತ್ರ. ಆ ಪರಮಪುರುಷನು ಚೈತನ್ಯಸ್ವರೂಪ. ಹೀಗಾಗಿ ದೃಶ್ಯ (ಜಗತ್ತು) ಹೊರಗೇನೂ ಇಲ್ಲ , ಅದು ಇರುವುದು ಮನಸ್ಸಿನಲ್ಲಿ ಮಾತ್ರವೇ. ಹಾಗೆಯೇ ದೃಕ್ (ಅದನ್ನು ನೋಡುವವನು ಅಥವಾ ಅನುಭವಿಸುವವನು) ಹೊರಗೇನೂ ಇಲ್ಲ. ಅವನು ಒಳಗೇ ಇದ್ದಾನೆ. ನಮ್ಮ ವೈಯಕ್ತಿಕ ನೆಲೆಯ ಜಗದನುಭವವೂ ಹೀಗೆಯೇ. ನಮ್ಮ ಪ್ರತಿಯೊಂದು ಅನುಭವವೂ ಮನೋಜನಿತವಾದದ್ದೇ ಆಗಿದೆ; ಏಕೆಂದರೆ ಮನಸ್ಸು ಬಿಟ್ಟು ಬೇರೆ ಜಗತ್ತೇ ಇಲ್ಲ. ಮನಸ್ಸೆಂಬುದು ಭ್ರಮೆ. ಹೀಗಾಗಿ ಜಗತ್ತೂ ಭ್ರಮೆ. ಹಾಗಾದರೆ ಇರುವುದು ಏನು? ಚೈತನ್ಯವೊಂದೇ. ನಿಜವಾಗಿ ಹೇಳಬೇಕಾದರೆ, 'ಜಗತ್ತು', 'ಅನಂತ', 'ಬ್ರಹ್ಮ', 'ಆತ್ಮ' – ಈ ಪದಗಳ ಅರ್ಥಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಎಚ್ಚರದ ಸ್ಥಿತಿಗೆ ಹೋಲಿಸಿದಲ್ಲಿ ಕನಸಿನ ನಗರ ಎಷ್ಟು ಸತ್ಯವೋ, ಬ್ರಹ್ಮನಿಗೆ ಹೋಲಿಸಿದಲ್ಲಿ ಈ ಜಗತ್ತೂ ಅಷ್ಟೇ ಸತ್ಯ. 'ಜಗತ್ತು' ಮತ್ತು 'ವಿಶ್ವಚೈತನ್ಯ' – ಈ ಎರಡೂ ಪದಗಳು ಸಮಾನಾರ್ಥಕಗಳು. ಅಂದರೆ ಎಲ್ಲವೂ ಚೈತನ್ಯಮಯವೇ. ಜಗತ್ತೆಂಬುದು ಚೈತನ್ಯದ ತೋರಿಕೆ ಮಾತ್ರ.

''ಓ ರಾಮ, ಇದನ್ನು ಇನ್ನೂ ಸ್ಪಷ್ಟವಾಗಿ ಅರಿಯಲು, ನಾನೀಗ ಹೇಳುವ ಅದ್ಭುತವಾದ ಕಥೆಯನ್ನು ಕೇಳು:

ಹಿಂದೊಂದು ಕಾಲದಲ್ಲಿ ಪದ್ಮನೆಂಬ ರಾಜನು ಈ ಭೂಮಿಯನ್ನು ಆಳುತ್ತಿದ್ದನು. ಸ್ವಭಾವದಲ್ಲಿ ಮತ್ತು ನಡತೆಯಲ್ಲಿ ಅವನೊಬ್ಬ ಪರಿಪೂರ್ಣ ವ್ಯಕ್ತಿ. ಇದಲ್ಲದೆ ಮಹಾಮೇಧಾವಿ ಕೂಡ. ಅವನಿಗೆ ಅನುರೂಪಳಾಗಿದ್ದವಳು ಅವನ ಹೆಂಡತಿ ಲೀಲಾ. ಪದ್ಮ ಮತ್ತು ಲೀಲೆಯರಿಬ್ಬರೂ ನಾರಾಯಣ – ಮಹಾಲಕ್ಷ್ಮಿಯರಂತೆ ಕಂಗೊಳಿಸುತ್ತಿದ್ದರು; ಅನ್ಯೋನ್ಯವಾಗಿದ್ದರು; ಹಲವಾರು ಸದ್ಗುಣಗಳಿಂದ ಒಬ್ಬರಿಗೊಬ್ಬರು ಮೀರಿಸುವಂತಿದ್ದರು. ಅವರಿಬ್ಬರೂ ಒಬ್ಬರನ್ನು ಬಿಟ್ಟು ಇನ್ನೊಬ್ಬರು ಇರಲಾಗದಂತಹ ಬೆಸುಗೆಯಲ್ಲಿ ಬಾಳುತ್ತಿದ್ದರು. ಒಂದು ದಿನ ಲೀಲೆಗೆ ಈ ಬಗೆಯ ಆಲೋಚನೆ ಬಂದಿತು: ನನ್ನ ಪ್ರಾಣಕ್ಕಿಂತಲೂ ಅತಿಪ್ರಿಯನು ನನ್ನ ಪತಿ. ಎಂದೆಂದಿಗೂ ಅವನ ಒಡನಾಟದಲ್ಲಿಯೇ ಇರಲು ಸಾಧ್ಯವಾದರೆ ಎಷ್ಟು ಚೆನ್ನಾಗಿರುತ್ತದೆ? ಅದಕ್ಕಾಗಿ ನಾನು ಮಾಡಬೇಕಾದುದಾದರೂ ಏನು? ಈ ಬಗ್ಗೆ ಹಲವು ಮಹಾತ್ಮರ ಸಲಹೆಯನ್ನು ಅವಳು ಕೇಳಿದಳು. ಅದಕ್ಕೆ ಅವರೆಲ್ಲ ನೀಡಿದ ಉತ್ತರ ಹೀಗಿತ್ತು: ರಾಣಿ, ತಪಸ್ಸು ಮತ್ತು ವ್ರತಗಳಿಂದ, ಮಂತ್ರೋಚ್ಚಾರಣೆಯಿಂದ, ನಿಯಮಬದ್ಧ ಜೀವನದಿಂದ ಈ ಜಗತ್ತಿನಲ್ಲಿ ಏನನ್ನು ಬೇಕಾದರೂ ಗಳಿಸಿಕೊಳ್ಳಬಹುದು. ಆದರೆ ಇವುಗಳಾವುದರಿಂದಲೂ ಈ ದೇಹದಲ್ಲಿಯೇ ಇದ್ದುಕೊಂಡು ಚಿರಜೀವನವನ್ನು ಪಡೆದುಕೊಳ್ಳಲು ಮಾತ್ರ ಸಾಧ್ಯವಾಗುವುದಿಲ್ಲ.

ರಾಣಿಯು ಹೀಗೆ ಯೋಚಿಸಿದಳು: ವಿಧಿಯ ಆಟವೇನು, ಬಲ್ಲವರಾರು? ಹೇಗಾದರೂ ಸರಿ. ನನ್ನ ಗಂಡನೇನಾದರೂ ನಾನು ಸಾಯುವುದಕ್ಕೆ ಮುಂಚೆಯೇ ದೇಹತ್ಯಾಗ ಮಾಡುವ ಪ್ರಸಂಗ ಒದಗಿಬಂದರೆ, ಅದಕ್ಕೆ ತಕ್ಕ ಸಿದ್ಧತೆಯನ್ನು ನಾನು ಈಗಲೇ ಮಾಡಿಕೊಳ್ಳಬೇಕು. ಅವನ ಜೀವವು ನಮ್ಮ ಅರಮನೆಯನ್ನು ದಾಟಿ ಹೋಗದಂತೆ ದೇವತೆಗಳಿಂದ ವರವನ್ನು ಪಡೆದುಕೊಳ್ಳಬೇಕು. ಅವನು ಎಂದೆಂದಿಗೂ ನನ್ನೊಡನೆಯೇ ಇದ್ದಾನೆ ಎಂಬ ಅರಿವಿನಿಂದ ನಾನು ಸರ್ವದಾ ಆನಂದ ಪಡಬೇಕು.

ಹೀಗೆ ನಿಶ್ಚಯಿಸಿದ ರಾಣಿ ಲೀಲೆಯು ದೇವಿ ಸರಸ್ವತಿಯನ್ನು ಒಲಿಸಿಕೊಳ್ಳಲು ಒಂದು ಕಠಿಣ ವ್ರತವನ್ನು ಒಡನೆ ಆರಂಭಿಸಿದಳು. ಇದರ ಬಗ್ಗೆ ತನ್ನ ಗಂಡನಿಗೆ ಏನೂ ತಿಳಿಸಲಿಲ್ಲ. ಅದರಂತೆ, ಮೂರು ರಾತ್ರಿಗಳಿಗೆ ಒಮ್ಮೆ ಮಾತ್ರ ಉಣ್ಣಲಾರಂಭಿಸಿದಳು; ಭಗವಂತನನ್ನು, ಸತ್ಪುರುಷರನ್ನು, ಗುರುಗಳನ್ನು, ವಿದ್ವಾಂಸರನ್ನು ಮತ್ತು ಋಷಿವರೇಣ್ಯರನ್ನು ಆದರದಿಂದ ಪೂಜಿಸಿ, ಸತ್ಕರಿಸಿ ಸಂತೋಷಪಡಿಸಿದಳು. ತನ್ನ ಈ ವ್ರತವು ಖಂಡಿತವಾಗಿಯೂ ಫಲಕೊಡುವುದೆಂಬ ಅದಮ್ಯ ವಿಶ್ವಾಸ ಅವಳಿಗೆ ಇತ್ತು. ಈ ರೀತಿ ಮೂರು ದಿನಗಳ ಪರ್ಯಂತದ ವ್ರತವನ್ನು ನೂರುಸಲ ಮಾಡಿದ ಮೇಲೆ ದೇವಿ ಸರಸ್ವತಿ ಅವಳ ಮುಂದೆ ಪ್ರತ್ಯಕ್ಷಳಾದಳು; ಯಾಚಿಸಿದ ವರವನ್ನು ಕೊಡುವೆನೆಂದಳು. ಆಗ ಲೀಲೆ ಹೀಗೆ ಪ್ರಾರ್ಥಿಸಿದಳು, ''ದಿವ್ಯ ಮಾತೆ, ನನಗೆ ಈ ಎರಡು ವರಗಳನ್ನು ದಯಪಾಲಿಸು – ಮೊದಲನೆಯದಾಗಿ, ನನ್ನ ಪತಿ ದೇಹಬಿಟ್ಟ ಮೇಲೆ, ಅವನ ಜೀವವು ನಮ್ಮೀ ಅರಮನೆಯಲ್ಲಿಯೇ ಉಳಿಯಬೇಕು. ಎರಡನೆಯದು, ನಾನು ನಿನ್ನನ್ನು ಪ್ರಾರ್ಥಿಸಿದಾಗಲೆಲ್ಲ ನೀನು ನನಗೆ ಪ್ರತ್ಯಕ್ಷಳಾಗಬೇಕು.'' ಈ ಎರಡು ವರಗಳನ್ನು ದಯಪಾಲಿಸಿ ಸರಸ್ವತಿಯು ಅದೃಶ್ಯಳಾದಳು.

ಕಾಲ ಉರುಳಿತು. ಯುದ್ಧರಂಗದಲ್ಲಿ ಗಾಯಗೊಂಡ ರಾಜ ಪದ್ಮನು ಅರಮನೆಯಲ್ಲಿ ಮರಣವನ್ನಪ್ಪಿದನು. ರಾಣಿ ಲೀಲೆಯು ಸಹಿಸಲಾಗದ ದುಃಖದಿಂದ ಸಂತ್ರಸ್ತಳಾದಳು. ಕಡುತಾಪದಲ್ಲಿ ಮುಳುಗಿದ್ದ ಅವಳಿಗೆ ದಿವ್ಯವಾಣಿಯೊಂದು ಕೇಳಿಸಿತು. ಅದು ದೇವಿ ಸರಸ್ವತಿಯ ಧ್ವನಿ. ಅದು ಹೀಗಿತ್ತು: ''ಮಗೂ, ರಾಜನ ದೇಹವನ್ನು ಹೂವುಗಳಿಂದ ಮುಚ್ಚಿಬಿಡು. ಆಗ ಅದು ಕೆಡುವುದಿಲ್ಲ. ರಾಜನ ಜೀವವು ಅರಮನೆಯನ್ನು ಬಿಟ್ಟು ಹೋಗುವುದೂ ಇಲ್ಲ.''

ಲೀಲಾ ಹಾಗೆಯೇ ಮಾಡಿದಳು. ಆದರೂ ಅವಳ ಮನಸ್ಸಿಗೆ ಸಮಾಧಾನವಿಲ್ಲ. ಹಣವಿದ್ದರೂ ಬಡತನದಲ್ಲಿ ಇರುವಂಥ ಭಾವನೆ ಅವಳ ಮನಸ್ಸಿನಲ್ಲಿ ಮನೆ ಮಾಡಿತ್ತು. ಕಡೆಗೆ ದೇವಿ ಸರಸ್ವತಿಯ ಆವಾಹನೆ ಮಾಡಿದಳು.

ಸರಸ್ವತಿ ಪ್ರತ್ಯಕ್ಷಳಾಗಿ ಲೀಲೆಯನ್ನು ಸಾಂತ್ವನಪಡಿಸಿದಳು: ''ಮಗೂ, ಇದೇಕೆ ಹೀಗೆ ದುಃಖಿಸುತ್ತಿದ್ದೀಯೆ? ಮರೀಚಿಕೆಯಲ್ಲಿರುವ ನೀರಿನಂತೆ ಸಂಕಷ್ಟವೂ ಒಂದು ಭ್ರಮೆ ಮಾತ್ರವಮ್ಮ!'' ಆಗ ಲೀಲಾ ತನ್ನ ಪತಿ ಎಲ್ಲಿರುವನೆಂದು ಕೇಳಿದಳು. ಅದಕ್ಕೆ ಸರಸ್ವತಿ ಕೊಟ್ಟ ಉತ್ತರ ಹೀಗಿತ್ತು: ''ಓ ಲೀಲಾ, ಆಕಾಶವೆಂಬುದು (ಇಲ್ಲಿ ಆಕಾಶವೆಂದರೆ ನಮ್ಮ ಸುತ್ತಲೂ ಇರುವ ಅವಕಾಶವೆಂದು ತಿಳಿದು ಕೊಳ್ಳಬೇಕು) ಮೂರು ವಿಧ. ಒಂದು ಮಾನಸಿಕ ಆಕಾಶ; ಇನ್ನೊಂದು ಭೌತಿಕ ಆಕಾಶ; ಹಾಗೂ ಮೂರನೆಯದು ಅನಂತ ಚೈತನ್ಯಾಕಾಶ. ಉತ್ಕಟ ಧ್ಯಾನದಿಂದ ಒಬ್ಬನ ದೇಹವು ಚೈತನ್ಯಾಕಾಶವೆಂದು ತಿಳಿದುಕೊಳ್ಳಬಹುದು. ನಿನ್ನೆಲ್ಲ ಆಲೋಚನೆಗಳೂ ನಶಿಸಿಹೋದಾಗ, ಇಲ್ಲಿಯೇ, ಈ ಕ್ಷಣದಲ್ಲಿಯೇ, ನೀನು ಸರ್ವರಲ್ಲಿಯೂ ಐಕಾತ್ಮ್ಯ ಭಾವವನ್ನು ತಳೆಯಬಲ್ಲೆ. ಇದನ್ನು ನನ್ನ ಅನುಗ್ರಹದಿಂದ ನೀನೀಗ ಪಡೆದುಕೊಳ್ಳುತ್ತೀಯೆ.''

ನಂತರ ಲೀಲೆಯು ಧ್ಯಾನ ಮಾಡಲಾರಂಭಿಸಿದಳು. ಒಡನೆ ಅವಳು ಉನ್ನತ ಸ್ಥಿತಿಗೆ ಏರಿದಳು. ಚೈತನ್ಯಾಕಾಶದಲ್ಲಿ ಅವಳೀಗ ನೆಲೆ ನಿಂತಿದ್ದಳು. ಅಲ್ಲೊಬ್ಬ ರಾಜನನ್ನು ಅವಳು ಕಂಡಳು. ಸಿಂಹಾಸನದ ಮೇಲೆ ಕುಳಿತಿದ್ದ ಅವನ ಸುತ್ತಲೂ ಹಲವಾರು ಸಾಮಂತ ರಾಜರು ಮತ್ತು ಋಷಿಮುನಿಗಳು ನೆರೆದಿದ್ದರು. ಲೀಲೆ ಅವರನ್ನೆಲ್ಲ ಕಂಡಳೇ ಹೊರತು, ಅವರೆಲ್ಲ ಇವಳನ್ನು ಕಾಣಲಿಲ್ಲ. ಏಕೆಂದರೆ, ಒಬ್ಬ ವ್ಯಕ್ತಿಯ ಆಲೋಚನಾರೂಪಗಳು ಅವನಿಗೆ ಮಾತ್ರವೇ ನೋಡಲು ಅಥವಾ ಅನುಭವಿಸಲು ಸಾಧ್ಯ. ರಾಜನು ಒಬ್ಬ ಸುಂದರ ಯುವಕನಾಗಿದ್ದನು. ಇದಲ್ಲದೆ, ರಾಜ ಪದ್ಮನ ಆಸ್ಥಾನದ ಹಲವಾರು ಸಭಿಕರು ಅಲ್ಲಿಯೂ ಇದ್ದರು. ಲೀಲಾ ಆಶ್ಚರ್ಯಪಟ್ಟಳು, ಇವರು ಕೂಡ ಸತ್ತುಹೋಗಿದ್ದಾರೋ ಹೇಗೆ?

ಸರಸ್ವತಿಯ ಅನುಗ್ರಹದಿಂದ ಲೀಲೆ ಮತ್ತೆ ಯಥಾಸ್ಥಿತಿಗೆ ಮರಳಿ ಬಂದಳು. ತನ್ನ ಸೇವಕರು ನಿದ್ರಿಸುತ್ತಿರುವುದನ್ನು ಕಂಡಳು. ಅವರನ್ನು ಎಬ್ಬಿಸಿ, ರಾಜಸಭೆಯ ಸದಸ್ಯರನ್ನೆಲ್ಲ ಒಟ್ಟುಗೂಡಿಸುವಂತೆ ಆದೇಶವಿತ್ತಳು. ಅವರೆಲ್ಲರೂ ಧಾವಿಸಿಬಂದರು. ಆಶ್ಚರ್ಯವೆಂದರೆ ಅವಳು ತನ್ನ ದರ್ಶನದಲ್ಲಿ ಕಂಡಿದ್ದ ಮಂತ್ರಿಗಳು, ಋಷಿಮುನಿಗಳು, ಅಧಿಕಾರಿಗಳು, ಸಂಬಂಧಿಕರು ಮತ್ತು ಸ್ನೇಹಿತರು ಇಲ್ಲೂ ಇದ್ದರು. ಇದನ್ನು ನೋಡಿ ಲೀಲಾ ಅಚ್ಚರಿಹೊಂದಿದಳು. 'ಒಬ್ಬರೇ ಜನರು ಎರಡು ಕಡೆಗಳಲ್ಲಿ ಇರಲು ಹೇಗೆ ಸಾಧ್ಯ?' ಎಂದುಕೊಂಡಳು. ಮತ್ತೆ ಸರಸ್ವತಿಯನ್ನು ಪ್ರಾರ್ಥಿಸಿ, ಅವಳು ಕಾಣಿಸಿಕೊಂಡಾಗ ತನ್ನ ಸಂದೇಹವನ್ನು ತೋಡಿಕೊಂಡಳು. ತನಗೆ ಉಂಟಾದ ಎರಡು ಬಗೆಯ ಅನುಭವಗಳಲ್ಲಿ ಯಾವುದು ಸತ್ಯ, ಯಾವುದು ಭ್ರಮೆ ಎಂದು ತಿಳಿಸಬೇಕಾಗಿ ಕೇಳಿಕೊಂಡಳು.

**ಸರಸ್ವತಿ:** ಲೀಲಾ, ನೀನೇ ಹೇಳು. ನಿನಗೆ ಯಾವುದು ನಿಜ ಎಂದು ತೋರುತ್ತದೆ? ಯಾವುದು ಸುಳ್ಳು ಎಂದು ತೋರುತ್ತದೆ?

**ಲೀಲಾ:** ನಾನಿಲ್ಲಿದ್ದೇನೆ; ನೀನು ನನ್ನ ಮುಂದೆ ನಿಂತಿದ್ದೀಯೆ. ಇದನ್ನೇ ನಾನು ನಿಜ ಎಂದು ಅಂದುಕೊಂಡಿದ್ದೇನೆ. ನನ್ನ ಗಂಡನು ಇರುವ ಲೋಕವಿದೆಯಲ್ಲ, ಅದು ಮಿಥ್ಯೆಯೇ ಸರಿ.

**ಸರಸ್ವತಿ:** ಲೀಲಾ, ಇಡೀ ಸೃಷ್ಟಿಗೆ ಕಾರಣ ಯಾವುದು ಗೊತ್ತೆ? ಸ್ಮರಣೆ ಅಥವಾ ನೆನಪು. ಯಾವುದರ ನೆನಪು? ಹಿಂದಿನ ಸೃಷ್ಟಿಯ ನೆನಪು. ಆ ಹಿಂದಿನ ಸೃಷ್ಟಿ ಯಾವುದು? ಅದೇ ನೆನಪೇ. ಸ್ಮರಣೆ ಎಂದರೆ ಏನು? ಬರೀ ಶೂನ್ಯ. ಹೀಗಾಗಿ ಅದರಿಂದ ಹೊರಹೊಮ್ಮಿದ ಈ ಜಗತ್ತೂ ಶೂನ್ಯವೇ. ಆದ್ದರಿಂದ ನಿನ್ನ ಗಂಡನ ಹುಟ್ಟು ಕೂಡ ಒಂದು ಭ್ರಮೆಯೇ ಸರಿ. ಏಕೆಂದರೆ ಇಡೀ ಜಗತ್ತು ನಮ್ಮ ಮನಸ್ಸಿನ ಸ್ಮರಣೆ ಮಾತ್ರ; ನಮ್ಮ ಕಲ್ಪನೆಯ ವಿಲಾಸ ಮಾತ್ರ. ಇದೊಂದು ಸ್ವಪ್ನ ಸದೃಶವಾದ ಅಸ್ತಿತ್ವ. ಇದರಲ್ಲಿ ಯಾವುದೇ ರೀತಿಯ ಸತ್ವವೂ ಇಲ್ಲ. ಇದನ್ನು ಬಿಂಬಿಸುವ ಒಂದು ಕಥೆ ಹೇಳುತ್ತೇನೆ, ಕೇಳು.

ಸರಸ್ವತಿ ಕಥೆ ಹೇಳಲು ಆರಂಭಿಸಿದಳು. *(ಮುಂದಿನ ಸಂಚಿಕೆಗೆ)*




**ಮಿಂಚಿನ ತೇರು**
*ಲೇಖಕರು:*
**ಡಾ.ಪ್ರಭುಶಂಕರ**
*ಪ್ರಕಾಶಕರು:*
**ಅಭಿಜ್ಞಾನ,**
**ನಂ.೨, ದತ್ತಾತ್ರೇಯ ದೇವಸ್ಥಾನ, ಪೈಪ್‌ಲೈನ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩**
**ಫೋ: ೯೪೪೮೯೮೯೮೯**
**ಬೆಲೆ: ₹ ೧೨೦**
**ಪುಟಗಳು : ೧೪೮**

# ಪ್ರಭುಶಂಕರರ 'ಮಿಂಚಿನತೇರು'

**ಹ**ಲವು ದಶಕಗಳಿಂದ ರಾಮಕೃಷ್ಣ-ವಿವೇಕಾನಂದರ ವಿಚಾರ ಧಾರೆಯನ್ನು ನಿರಂತರವಾಗಿ ಅಧ್ಯಯನ ಮಾಡುತ್ತಿರುವ, ನಾಡಿನ ಹಿರಿಯ ವಿದ್ವಾಂಸರಾದ ಡಾ.ಪ್ರಭುಶಂಕರ ಅವರ '**ಮಿಂಚಿನ ತೇರು**' ಒಂದು ಸೊಗಸಾದ ಕೃತಿ. ರಾಮಕೃಷ್ಣ ಆಶ್ರಮದ ನಿಕಟ ಸಂಪರ್ಕ ದಲ್ಲಿರುವ ಪ್ರಭುಶಂಕರ ಅವರು ರಾಮಕೃಷ್ಣರು, ಶ್ರೀಮಾತೆ, ವಿವೇಕಾನಂದರ ಬಗ್ಗೆ ಕುರಿತು ಉಪನ್ಯಾಸಗಳನ್ನು ಕೊಡುವಾಗ ಮಾಡಿಕೊಂಡಿದ್ದ ಟಿಪ್ಪಣಿಗಳಿಂದ ರೂಪುಗೊಂಡ ಲೇಖನಗಳ ಸಂಗ್ರಹ, 'ಮಿಂಚಿನ ತೇರು.'

ರಾಮಕೃಷ್ಣ-ವಿವೇಕಾನಂದರ ಚಿಂತನೆಗಳು ವ್ಯಾಪಕವಾಗಿ ಪ್ರಚಾರವಾಗಬೇಕು, ಅವರ ಪ್ರಾಯೋಗಿಕ ವಿಚಾರಧಾರೆಯ ಬೆಳಕಿನಲ್ಲಿ ಜನ ನೆಮ್ಮದಿಯನ್ನು ಕಂಡುಕೊಳ್ಳಬೇಕೆಂಬ ಕಳಕಳಿ ಲೇಖಕರ ಮಾತಿನಲ್ಲಿ ಸ್ಪಷ್ಟವಾಗಿ ವ್ಯಕ್ತಗೊಂಡಿದೆ. ಇಲ್ಲಿ ವೈಚಾರಿಕ ನೆಲೆಗಟ್ಟಿನ ಮೇಲೆ ರಾಮಕೃಷ್ಣ – ವಿವೇಕಾನಂದರ ವಿಚಾರಗಳನ್ನು ಗ್ರಹಿಸುವುದು, ಲೇಖಕರಿಗೆ, ಅಧುನಿಕ ಕಾಲದಲ್ಲಿ ಆರಾಧನೆ-ವೈಭವದ ಪೂಜೆಗಿಂತ, ವಿವೇಕ ವಿಚಾರಧಾರೆ, ಚರ್ಚೆ-ಸಂವಾದಗಳಿಗೆ ಒಳಪಡಬೇಕೆಂಬ ಆಶಯವಿದೆ.

ಪ್ರಭುಶಂಕರ ಅವರು ಹತ್ತಾರು ಪ್ರಶ್ನೆಗಳನ್ನು ಹಾಕಿಕೊಂಡು ಅವುಗಳಿಗೆ ಉತ್ತರಿಸುವ ಕ್ರಮದಲ್ಲೆ ತಮ್ಮ ವಿಚಾರಗಳನ್ನು ಮಂಡಿಸುತ್ತಾರೆ. ಈ ಕ್ರಮ ಓದುಗರಿಗೆ ವಿಚಾರ ಮಾಡಲು ಸ್ಫೂರ್ತಿ ನೀಡುತ್ತದೆ. ಎಲೆಕ್ಟ್ರಾನಿಕ್ ಮಾಧ್ಯಮಗಳ ಮೂಲಕ ಮೌಢ್ಯ ಪರಿಣಾಮಕಾರಿಯಾಗಿ ಪ್ರಚಾರವಾಗುತ್ತಿರುವ ಪ್ರಸ್ತುತ ಸನ್ನಿವೇಶದಲ್ಲಿ, ರಾಮಕೃಷ್ಣ-ವಿವೇಕಾನಂದರ ವೈಚಾರಿಕ ಚಿಂತನೆಗಳು ಅತ್ಯಗತ್ಯ ವಾದುದು ಎಂದು ಲೇಖಕರು ಒತ್ತಿ ಹೇಳುತ್ತಾರೆ. ತನ್ನತನ ಕಳೆದು ಕೊಂಡು ಕೃತಕ ಸಿದ್ಧಮಾದರಿಗೆ ತಮ್ಮನ್ನು ಒಗ್ಗಿಸಿಕೊಳ್ಳಲು ಹೆಣಗುತ್ತಿರುವ ಯುವಕರು, '**ಮಿಂಚಿನತೇರು**' ಕೃತಿಯನ್ನು ಗಂಭೀರವಾಗಿ ಓದುವ ಅಗತ್ಯವಿದೆ. ಪ್ರಭುಶಂಕರ ಅವರ 'ಮಿಂಚಿನ ತೇರು' ಕೃತಿಯಲ್ಲಿ, 'ಸ್ವಾಮಿ ವಿವೇಕಾನಂದರ ಸಾಮಾಜಿಕ ಕಳಕಳಿ', 'ಸ್ವಾಮಿ ವಿವೇಕಾನಂದರ ದೃಷ್ಟಿಯಲ್ಲಿ ಶಿಕ್ಷಣ', 'ಶ್ರೀರಾಮಕೃಷ್ಣ ಪರಮಹಂಸರು ಈ ಜಗತ್ತಿಗೆ ನೀಡಿದ್ದಾದರೂ ಏನು?' 'ದೇವಿಯೊ ಮಾನವಿಯೊ' – ಈ ಲೇಖನಗಳು ಮಾನವೀಯತೆಯಿಂದ ಕೂಡಿರುವ ಮೌಲಿಕ ಬರಹಗಳು. ಈ ವೈಚಾರಿಕ ಬರಹಗಳ ಓದು ಓದುಗರಿಗೆ ರಾಮಕೃಷ್ಣ-ವಿವೇಕಾನಂದರ ಸಮಗ್ರ ಸಾಹಿತ್ಯವನ್ನು ಅಧ್ಯಯನ ಮಾಡಲು ಪ್ರೇರಣೆ ನೀಡುತ್ತದೆ.

ಪ್ರಭುಶಂಕರ ಅವರ ಮನಮುಟ್ಟುವ ಸೊಗಸಾದ ಗದ್ಯಶೈಲಿ, ವಿಚಾರಗಳನ್ನು ಮಂಡಿಸುವ ಕ್ರಮ ಇವುಗಳನ್ನು 'ಮಿಂಚಿನ ತೇರು' ಕೃತಿಯ ಪ್ರತಿ ಪುಟದಲ್ಲೂ ಕಾಣಬಹುದು. ವಿಚಾರವಂತರು ಓದಲೇ ಬೇಕಾದ ಕೃತಿ 'ಮಿಂಚಿನತೇರು'.

***– ಎಸ್.ಎಸ್.ರಮೇಶ್,***
*ಶ್ರೀರಾಮಕೃಷ್ಣ ವಿದ್ಯಾಶಾಲಾ, ಮೈಸೂರು.*

## ಯಾರು ಸ್ವಾಮಿ ಆಯಮ್ಮ?

**ಒಂ**ದು ದಿನ ಮಾತಿನ ಮಧ್ಯೆ ಮುಕುಂದೂರು ಸ್ವಾಮಿಗಳು ಹೇಳಿದರು, ''ಒಬ್ಬಾಯಮ್ಮ ಇದಾಳೆ. ಆಯಮ್ಮ ಆರುಜನ ಮಕ್ಳನ್ನ ಹಡೆದವ್ಳೆ. ಆ ಆರೂ ಜನಾನೂ ಒಳ್ಳೆ ಒಗ್ಗಟ್ಟಾಗಿರ್ತಾರೆ. ಒಬ್ಬನ್ ಬಿಟ್ ಒಬ್ಬನಿರಲ್ಲ. 'ಎಂಥಾ ಒಳ್ಳೆ ಹುಡ್ಗುರಪ್ಪ' ಅಂತ ನೀನೇನಾರಾ ಒಬ್ಬನ್ನ ಹತ್ರ ಕರಕೊಂಡ್ರೆ ಆರೂ ಜನಾನೂ ಬಂದ್‌ಬಿಡ್ತಾರೆ. ಯಾಕೆಂದ್ರೆ ಅಂಥಾ ಒಗ್ಗಟ್ಟು ಅವ್ರುದು. ನೀನೂ ಅವ್ರು ಕುಟೆ ಆಟ ಆಡ್ಕೊಂಡು ಕಾಲ ಕಳಿತೀಯ. ಅವ್ರ ತಾಯಿ ಇದಾಳ್ ನೋಡು – 'ಆಯಮ್ಮ ನನ್ ಮಕ್ಳು ಎಲ್ಲಿಗೋದ್ರು' ಅಂತ ಹುಡಿಕ್ಯಾಡಿಕೊಂಡು ಬತ್ತಾಳೆ. ನಿನ್ ತಾವ ಅವಿರದ್ನ ಕಂಡು ಸಿಟ್ಟಾಗಿ, ನಿನ್ನಿಡಕೊಂಡು ಕೆನ್ನೆ ಕನ್ನೆಗೆ ಒದ್ದು, ಕಾಲಾಗ್ ತುಳ್ದು ಒಸಗ್ದಾಕಿ ತನ್ನ ಮಕ್ಳುನ ಕರಕೊಂಡು ಅದೇ ಹೋಗ್ತಾಳೆ. ನನ್ ಕಥೇನೇ ಮುಗಿದೋಯ್ತು ...ಅಂಥೋಳು ಆ ಯಮ್ಮ..''

ಪಕ್ಕದಲ್ಲಿದ್ದವರು, ''ಯಾರ್ ಸ್ವಾಮಿ ಆಯಮ್ಮ?'' ಎಂದು ಕೇಳಿದಾಗ:

''ಲೇ ಆಯಮ್ಮ ಮಾಯಮ್ಮ ಕಣೋ'' ಎಂದು ನಕ್ಕರು. ಎಲ್ಲರೂ ನಕ್ಕೆವು. ಅರಿಷಡ್‌ವರ್ಗಗಳಲ್ಲಿ ಕಾಮ ಎಂಬ ಒಂದನ್ನು ಹತ್ತಿರಕ್ಕೆ ಕರೆದುಕೊಂಡರೂ ಉಳಿದ ಐದು ವರ್ಗಗಳು ಒಳಹೊಕ್ಕು ನಮ್ಮನ್ನು ನಾಶಮಾಡಿಬಿಡುತ್ತವೆ ಎಂಬುದನ್ನು ಎಷ್ಟೊಂದು ಹಾಸ್ಯಮಯವಾಗಿ ವಿವರಿಸಿದರಲ್ಲಾ! ಎಂದು ನನಗೆ ಆಶ್ಚರ್ಯವಾಯಿತು.

**–ಬೆಳಗೆರೆ ಕೃಷ್ಣಶಾಸ್ತ್ರೀ** *('ಯೇಗ್ದಾಗೆಲ್ಲಾ ಐತೆ' ಗ್ರಂಥದಿಂದ)*

# ರಾಮನಾಮದ ಮಹಿಮೆ

**ಕಥೆ: ಆರ್.ಜಾವೆಂತಿನಾಥನ್** **ಚಿತ್ರ : ಮಣಿಸೆಲ್ವನ್**

1

ಒಂದು ಸಲ ರಾಜ ಶಕುಂತನ ಆಸ್ಥಾನದಲ್ಲಿ ವಿಶ್ವಾಮಿತ್ರ ಹಾಗೂ ಇತರ ಋಷಿಗಳು ಸೇರಿದ್ದರು.

ರಾಜ ವಿನಯದಿಂದ ವಸಿಷ್ಠರಿಗೆ ಹೇಳಿದ..

ಮಹರ್ಷಿಗಳೆ ! ನಿಮ್ಮ ಆಗಮನ ನನ್ನ ಮಹಾಭಾಗ್ಯವೆಂದೇ ನಾನು ಭಾವಿಸುತ್ತೇನೆ. ನನ್ನನ್ನು ಅನುಗ್ರಹಿಸಿ.

2

ಆಸ್ಥಾನದಲ್ಲಿದ್ದ ವಿಶ್ವಾಮಿತ್ರ ರಾಜನ ಮಾತನ್ನು ತಪ್ಪಾಗಿ ಅರ್ಥಮಾಡಿಕೊಂಡ.

ಶಕುಂತ ! ವಸಿಷ್ಠರು ಮಾತ್ರವೇ ಮಹರ್ಷಿ ಎಂದು ನೀನು ಭಾವಿಸಿದ್ದೀಯಾ? ನಾನು ಇಲ್ಲಿರುವುದು ನಿನಗೆ ಕಾಣಿಸುತ್ತಿಲ್ಲವೆ? ಅವನನ್ನು ಹೊಗಳುವ ಮೂಲಕ ನನ್ನನ್ನು ಅವಮಾನಿಸಿದ್ದೀ ನೀನು.

3

ಶಕುಂತ ವಿಶ್ವಾಮಿತ್ರನ ಬಳಿಗೆ ಬಂದ.

ಇಲ್ಲ ಋಷಿಗಳೆ! ನೀವು ನನ್ನನ್ನು ತಪ್ಪು ತಿಳಿದುಕೊಂಡಿದ್ದೀರಿ.

4

ನನ್ನನ್ನು ನೀನು ಅವಮಾನಿಸಿದ್ದೀಯಾ. ಇದಕ್ಕಾಗಿ ನಾಳೆ ಸೂರ್ಯಾಸ್ತದ ಒಳಗಾಗಿ ನಿನ್ನ ತಲೆ ನನ್ನ ಕಾಲ ಮೇಲೆ ಉರುಳುವಂತೆ ಮಾಡುತ್ತೇನೆ, ನೋಡು!

ರಾಜ ಅದೆಷ್ಟೇ ಬೇಡಿಕೊಂಡರೂ, ವಿಶ್ವಾಮಿತ್ರ ಕೇಳಲಿಲ್ಲ.

5 ವಿಶ್ವಾಮಿತ್ರ ಶ್ರೀರಾಮನ ಬಳಿಗೆ ಹೋದ..

ರಾಮ! ಶಕುಂತ ನನ್ನನ್ನು ಅವಮಾನಿಸಿದ್ದಾನೆ. ನೀನು ಅವನನ್ನು ಸೋಲಿಸಿ, ನಾಳೆ ಸೂರ್ಯಾಸ್ತದ ಒಳಗಾಗಿ ಅವನ ತಲೆ ನನ್ನ ಕಾಲ ಮೇಲೆ ಉರುಳುವಂತೆ ಮಾಡು. ಇದು ನನ್ನ ಆಜ್ಞೆ.

ಗುರುಗಳೆ, ನಿಮ್ಮ ಆಜ್ಞೆಯನ್ನು ನಾನು ಪಾಲಿಸುತ್ತೇನೆ.






**8** ನಾರದನ ಸಲಹೆಯಂತೆ ಶಕುಂತ ಹನುಮಂತನ ಬಳಿಗೆ ಹೋಗಿ ಪ್ರಾರ್ಥಿಸಿದ.




ಹನುಮಂತನಿಗೆ ಅವನ ಮೇಲೆ ಅನುಕಂಪವುಂಟಾಯಿತು.

**9** ಶಕುಂತನನ್ನು ಶ್ರೀರಾಮನೇ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದ್ದಾನೆಂದು ಗೊತ್ತಿಲ್ಲದ ಹನುಮಂತ..




**10** ಶ್ರೀರಾಮನೇ ಶಕುಂತನನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿರುವ ವಿಷಯ ಹನುಮಂತನಿಗೆ ತಡವಾಗಿ ಗೊತ್ತಾಯಿತು. ಆದರೆ ಕೊಟ್ಟ ಮಾತಿನಿಂದ ಹಿಂಜರಿಯಲಾರೆ ಎಂದು ಅವನು ಶ್ರೀರಾಮನನ್ನು ಯುದ್ಧದಲ್ಲಿ ಎದುರಿಸಲು ಹೊರಟ.



ಆದರೆ ಹನುಮಂತ ಶ್ರೀರಾಮನೊಂದಿಗೆ ಯುದ್ಧ ಮಾಡಲಿಲ್ಲ. ಬದಲಾಗಿ, ಅವನು ಶ್ರೀರಾಮನ ನಾಮವನ್ನೇ ಕವಚವನ್ನಾಗಿ ಮಾಡಿಕೊಂಡು, ರಾಮನನ್ನೇ ಪ್ರಾರ್ಥಿಸುತ್ತ , ಕೈಮುಗಿದು ಧ್ಯಾನ ಮಾಡತೊಡಗಿದ.

**11** ಶ್ರೀರಾಮ ಹನುಮಂತನತ್ತ ಬಾಣಬಿಟ್ಟ. ಆದರೆ ಅವನ ಬಾಣಗಳು ಹನುಮಂತನ ದೇಹವನ್ನು ಗಾಯಗೊಳಿಸಲಿಲ್ಲ. ಏಕೆಂದರೆ ಅವನು ರಾಮನಾಮವನ್ನು ಜಪಿಸುತ್ತಿದ್ದ. ರಾಮನಾಮವು ಬಾಣಗಳನ್ನು ತಡೆಯುವ ಕವಚದಂತೆ ಹನುಮಂತನನ್ನು ರಕ್ಷಿಸಿತು.



**12** ಆಗ ಅಲ್ಲಿಗೆ ಬಂದ ವಿಶ್ವಾಮಿತ್ರನಿಗೆ ಸಂದರ್ಭದ ಅರಿವಾಯಿತು. ಅವನು ಶಕುಂತನ ಕ್ಷಮೆ ಕೇಳಿದ. ಶಕುಂತನ ಮಾತನ್ನು ತಾನು ತಪ್ಪು ತಿಳಿದುಕೊಂಡಿದ್ದೆನೆಂದೂ ಅವನಿಗೆ ಅರ್ಥವಾಯಿತು.



**13** ಅವನು ಎಲ್ಲವನ್ನೂ ಶ್ರೀರಾಮನಿಗೆ ವಿವರಿಸಿದ. ಅವನ ಮಾತನ್ನು ಕೇಳಿದ ಶ್ರೀರಾಮ ಹನುಮಂತನನ್ನುಹೊಗಳಿದ.




ಈ ಕಥೆ ಶ್ರೀರಾಮನ ಮೇಲೆ ಹನುಮಂತನಿಗಿದ್ದ ಅನುಪಮ ಭಕ್ತಿಯನ್ನೂ , ರಾಮನಾಮದ ಶಕ್ತಿಯನ್ನೂ ತಿಳಿಸಿಕೊಡುತ್ತದೆ.






# ಮಂಗಳೂರು ರಾಮಕೃಷ್ಣ ಮಿಷನ್‌ನಲ್ಲಿ 'ಜಾಗೃತ ಭಾರತ'

ಮಂಗಳೂರು ರಾಮಕೃಷ್ಣ ಮಿಶನ್‌ನಲ್ಲಿ ೨೦೧೫ರ ಜನವರಿ ೩೦ರಿಂದ ಫೆಬ್ರುವರಿ ೨ರ ವರೆಗೆ ನಾಲ್ಕು ದಿನಗಳ ಸರಣಿ ಕಾರ್ಯಕ್ರಮ **'ಜಾಗೃತ ಭಾರತ'** ನಡೆಯಿತು. ಇದರಲ್ಲಿ ಸುಮಾರು ೨೫೦೦ ಮಂದಿ ಯುವಕ-ಯುವತಿಯರು ಪಾಲ್ಗೊಂಡಿದ್ದರು. ಅಂತರರಾಷ್ಟ್ರೀಯ ಖ್ಯಾತಿಯ ಹಲವು ವಿದ್ವಾಂಸರು ಭಾಷಣ-ಚರ್ಚೆ-ಸಂವಾದಗಳನ್ನು ನಡೆಸಿಕೊಟ್ಟರು.



ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರ ಬೇಲೂರು ಮಠದ ನಿರ್ದೇಶನದ ಪ್ರಕಾರ ಮಂಗಳೂರು ರಾಮಕೃಷ್ಣ ಮಿಶನ್ **'ಸ್ವಚ್ಛ ಭಾರತ ಅಭಿಯಾನ'**ವನ್ನು ಕೈಗೆತ್ತಿಕೊಂಡಿದೆ. ಇದರ ಅಂಗವಾಗಿ ಮಂಗಳೂರು ಆಶ್ರಮದಲ್ಲಿ ಫೆಬ್ರುವರಿ ೧ ರಂದು **'ಸ್ವಚ್ಛ ಭಾರತಕ್ಕಾಗಿ ಸ್ವಚ್ಛ ಮಂಗಳೂರು'** ಎಂಬ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಸುಮಾರು ४೦೦೦ ಮಂದಿ ಯುವಕರು ४೦ ವಾರಗಳ ಕಾಲ ಮಂಗಳೂರು ನಗರದ ४೦ ವಾರ್ಡ್‌ಗಳಲ್ಲಿ ಸ್ವಚ್ಛತಾ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದಾರೆ.

ಫೆಬ್ರುವರಿ ೧ ರಂದು ಮಂಗಳೂರು ನಗರಸಭೆಯ ಸುಮಾರು ೭೫ ಮಂದಿ ಕಸ ಗುಡಿಸುವ ನೌಕರರು ಹಾಗೂ ಇತರ ನೌಕರರನ್ನು ಅವರು ಸಲ್ಲಿಸುತ್ತಿರುವ ಸೇವೆಗಾಗಿ ಸನ್ಮಾನಿಸಲಾಯಿತು.

# ಮೈಸೂರು ರಾಮಕೃಷ್ಣ ಆಶ್ರಮದಲ್ಲಿ ವಾರ್ಷಿಕೋತ್ಸವ

ಭಗವಾನ್ ಶ್ರೀರಾಮಕೃಷ್ಣರ ೧೮೦ ನೇ ಜನ್ಮದಿನೋತ್ಸವದ ಅಂಗವಾಗಿ ೨೦೧೫ರ ಫೆಬ್ರುವರಿ ೨೧ ರಿಂದ ೨೭ರ ವರೆಗೆ, ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ವಿವಿಧ ಸಾಂಸ್ಕೃತಿಕ ಹಾಗೂ ಸಭಾಕಾರ್ಯಕ್ರಮಗಳೊಂದಿಗೆ ವಾರ್ಷಿಕೋತ್ಸವ ನಡೆಯಿತು.







**ಫೆಬ್ರವರಿ ೨೧** ರಂದು ವಾರ್ಷಿಕೋತ್ಸವದ ಉದ್ಘಾಟನೆ ನಡೆಯಿತು. ಕರ್ನಾಟಕ ಸರ್ಕಾರದ ಕಂದಾಯ ಸಚಿವರಾದ ಶ್ರೀ ಶ್ರೀನಿವಾಸ ಪ್ರಸಾದ್ ಉದ್ಘಾಟನೆಯನ್ನು ನೆರವೇರಿಸಿ ಮಾತನಾಡಿದರು. **ಫೆ.೨೨**ರಂದು ಡಾ.ಪ್ರಧಾನ ಗುರುದತ್ ಅವರಿಂದ ಭಾಷಣ, ಡಾ.ಕಿಕ್ಕೇರಿ ಕೃಷ್ಣಮೂರ್ತಿ, ಶಿವಮೊಗ್ಗ ಸುಬ್ಬಣ್ಣ ಹಾಗೂ ಸಂಗಡಿಗರಿಂದ ಭಕ್ತಿ ಸಂಗೀತ ನಡೆಯಿತು. **ಫೆ.೨೩** ರಂದು ಕಾರ್ಕಳದ ಶ್ರೀ ಮಹಾಗಣಪತಿ ಕಲೆ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನದವರಿಂದ **'ಶ್ರೀಕೃಷ್ಣಲೀಲೆ-ಕಂಸವಧೆ'** ಎಂಬ ಯಕ್ಷಗಾನ ನಡೆಯಿತು. **ಫೆ.೨४**ರಂದು ತುಮಕೂರು ರಾಮಕೃಷ್ಣ-ವಿವೇಕಾನಂದ ಆಶ್ರಮದ ಸ್ವಾಮಿ ವೀರೇಶಾನಂದ ಸರಸ್ವತಿಯವರಿಂದ ಉಪನ್ಯಾಸ, ಬಳಿಕ ಸಾಗರದ ಶ್ರೀಮತಿ ಸೀತಾ ಬಾಪಟ್ ಹಾಗೂ ಶ್ರೀ ಅರುಣ ವೆಂಕಟವಳ್ಳಿಯವರಿಂದ **'ಶ್ರೀರಾಮಕೃಷ್ಣ ಚರಿತೆ'** ಯ ಗಮಕ ವಾಚನ-ಪ್ರವಚನ ನಡೆಯಿತು. **ಫೆ.೨೫**ರಂದು ಶ್ರೀ ಕಬ್ಬಿನಾಲೆ ವಸಂತ ಭಾರದ್ವಾಜ್ ಅವರಿಂದ ಭಾಷಣ, ಶ್ರೀ ಅಶ್ವಿನ್ ವಲವಲ್ಕರ್ ಅವರಿಂದ ಸಂತೂರ್ ವಾದನ ನಡೆಯಿತು. **ಫೆ.೨೬**ರಂದು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳಾದ ಡಾ.ಮಲ್ಲೇಪುರಂ ಜಿ.ವೆಂಕಟೇಶ್ ಅವರಿಂದ ಪ್ರವಚನ, ಖ್ಯಾತ ಗಾಯಕ ಪ್ರೊ. ವೆಂಕಟೇಶ್ ಕುಮಾರ್ ಅವರಿಂದ ಭಜನ ಸುಧೆ ನಡೆಯಿತು. **ಫೆ.೨೭**ರಂದು ಶಿರಸಿಯ ವಿದ್ವಾನ್ ಶಂಕರ ಭಟ್ ಅವರಿಂದ **'ಭಕ್ತ ಪ್ರಹ್ಲಾದ'** ಎಂಬ ಹರಿಕಥೆ ನಡೆಯಿತು.

ಈ ಎಲ್ಲ ದಿನಗಳಲ್ಲಿ ಭಜನೆ, ಆರತಿಯೊಂದಿಗೆ ಕಾರ್ಯಕ್ರಮ ಆರಂಭಗೊಂಡು, ಕಲಾವಿದರ ಹಾಗೂ ವಿಶೇಷ ಅತಿಥಿಗಳ ಸನ್ಮಾನದೊಂದಿಗೆ ಮುಕ್ತಾಯಗೊಂಡಿತು.

Phone: (033) 2654-1144, 1180, 5391, 8494, 9581, 9681
Tele-fax: (033) 2654-6179
E-mail: hqsv150.convener@gmail.com
Website: www.belurmath.org



**RAMAKRISHNA MISSION**
*(The Headquarters)*
P.O. Belur Math, Dist. Howrah
West Bengal 711 202, India

## ಗದಾಧರ ಅಭ್ಯುದಯ ಪ್ರಕಲ್ಪ (GAP) ಯೋಜನೆ,

ರಾಮಕೃಷ್ಣ ಮಿಷನ್, (ಪ್ರಧಾನ ಕೇಂದ್ರ)
ಬೇಲೂರು ಮಠ, ಹೌರಾ ಜಿಲ್ಲೆ, ಪಶ್ಚಿಮ ಬಂಗಾಳ 711202

ಆತ್ಮೀಯರೆ,

# ಒಂದು ವಿಜ್ಞಾಪನೆ

ಸ್ವಾಮಿ ವಿವೇಕಾನಂದರ 150ನೇ ಜನ್ಮ ಶತಮಾನೋತ್ಸವದ ಅಂಗವಾಗಿ 2010ರ ಅಕ್ಟೋಬರ್‌ನಿಂದ 2014ರ ಸೆಪ್ಟೆಂಬರ್ ವರೆಗೆ ನಾವು ಭಾರತ ಸರ್ಕಾರದ ಸಂಸ್ಕೃತಿ ಸಚಿವಾಲಯದ ಆರ್ಥಿಕ ನೆರವಿನಿಂದ ''**ಗದಾಧರ ಅಭ್ಯುದಯ ಪ್ರಕಲ್ಪ**'' (**GAP**) ಎಂಬ ಮಕ್ಕಳ ಸರ್ವತೋಮುಖ ಅಭಿವೃದ್ಧಿ ಯೋಜನೆಯನ್ನು ಹಮ್ಮಿಕೊಂಡಿರುತ್ತೇವೆ. ಒಟ್ಟು 174 ಕೇಂದ್ರಗಳ ಮೂಲಕ, ಭಾರತದ ವಿಭಿನ್ನ ಪ್ರದೇಶಗಳಲ್ಲಿನ ನಗರ ಕೊಳಚೆ ಪ್ರದೇಶ ಹಾಗೂ ಹಲವು ಕುಗ್ರಾಮಗಳಿಗೆ ಸೇರಿದ ಸುಮಾರು 17,400 ಮಂದಿ ಅವಕಾಶ ವಂಚಿತರಾದ ಮಕ್ಕಳಿಗೆ ಈ ಯೋಜನೆಯ ಲಾಭ ದೊರಕಿದೆ. ಜಾತಿ, ಪಂಗಡ, ವರ್ಣ, ಧರ್ಮ ತಾರತಮ್ಯಗಳಿಲ್ಲದೆ ಈ ಮಕ್ಕಳ ದೈಹಿಕ, ಮಾನಸಿಕ, ಬೌದ್ಧಿಕ ಹಾಗೂ ಆಧ್ಯಾತ್ಮಿಕ ಬೆಳವಣಿಗೆಗೆ ಈ ಯೋಜನೆ ಅವಕಾಶ ಮಾಡಿಕೊಟ್ಟಿದೆ.

***ದೈಹಿಕ ಬೆಳವಣಿಗೆ:*** ಪ್ರತಿನಿತ್ಯ ಪುಷ್ಟಿದಾಯಕ ಆಹಾರ ವಿತರಣೆ; ಶಾಲಾ ಬ್ಯಾಗ್, ಸಮವಸ್ತ್ರ, ಅಧ್ಯಯನ ಸರಕರಣೆಗಳು, ಕೊಡೆ-ರೈನ್ ಕೋಟ್‌ಗಳು, ಚಪ್ಪಲಿ, ಬಚ್ಚಲುಮನೆ ಸಾಮಗ್ರಿಗಳು ಇತ್ಯಾದಿ ವಸ್ತುಗಳ ಪೂರೈಕೆ; ಕ್ರೀಡೆ, ವ್ಯಾಯಾಮ, ಆರೋಗ್ಯ ತಪಾಸಣೆ, ಆರೋಗ್ಯ ಮಾಹಿತಿ ಶಿಬಿರವೇ ಮೊದಲಾದ ಕಾರ್ಯಕ್ರಮಗಳು. ***ಮಾನಸಿಕ ಬೆಳವಣಿಗೆ:*** ಸಂಗೀತ, ನಾಟಕ, ವೇದಪಾಠ, ಚಿತ್ರಕಲೆ, ವಾಚನ, ನೃತ್ಯ; ಮಹಾಪುರುಷರ ಹಾಗೂ ಶ್ರೇಷ್ಠ ಮಹಿಳೆಯರ ಜೀವನ-ಉಪದೇಶಗಳ ಮೂಲಕ ಮೌಲ್ಯ ಶಿಕ್ಷಣ; ಶೈಕ್ಷಣಿಕ ಚಲನಚಿತ್ರ ಪ್ರದರ್ಶನ ಇತ್ಯಾದಿ. ***ಬೌದ್ಧಿಕ ಬೆಳವಣಿಗೆ:*** ವಿದ್ಯಾರ್ಥಿಗಳಿಗೆ ಮುಂದಿನ ವರ್ಷಗಳಲ್ಲಿ ಉತ್ತಮ ಶಿಕ್ಷಣ ಸಂಸ್ಥೆಗಳನ್ನು ಸೇರಲು ಅನುಕೂಲವಾಗುವಂತೆ ಪಠ್ಯ ವಿಷಯಗಳಲ್ಲಿ ಯೋಗ್ಯ ಕೋಚಿಂಗ್ ಕ್ಲಾಸುಗಳನ್ನು ನೀಡಲಾಗುತ್ತಿದೆ. ***ಆಧ್ಯಾತ್ಮಿಕ ಬೆಳವಣಿಗೆ:*** ಪ್ರಾರ್ಥನೆ, ಭಜನೆ ಹಾಗೂ ಧ್ಯಾನ ತರಬೇತಿ ಶಿಬಿರಗಳನ್ನು ನಡೆಸಲಾಗುತ್ತಿದೆ.

**GAP** ಯೋಜನೆಯು ಮಕ್ಕಳ, ಹೆತ್ತವರ, ಪಾಲಕರ ಹಾಗೂ ಆಯಾ ಪ್ರದೇಶದ ಜನತೆಯ ಮೇಲೆ ಅಗಾಧ ಪರಿಣಾಮವನ್ನು ಬೀರಿದೆ. ಆ ಪ್ರದೇಶಗಳ ಜನರು ಈ ಯೋಜನೆಯನ್ನು ಮುಂದುವರಿಸುವಂತೆ ಒತ್ತಾಯಿಸುತ್ತಿದ್ದಾರೆ. **GAP** ಮಕ್ಕಳ ಮೇಲೆ ನಮ್ಮ ಸಹೋದರ ಸಂನ್ಯಾಸಿಗಳು, ಸ್ವಯಂಸೇವಕರು ಹಾಗೂ ಭಕ್ತರು ತೋರಿಸುತ್ತಿರುವ ಪ್ರೀತಿಪೂರ್ವಕ ಕಾಳಜಿಯು ಅನೇಕ ವಲಯಗಳಲ್ಲಿ ಗಮನಾರ್ಹ ಬದಲಾವಣೆಯನ್ನು ತಂದಿದೆ.

**GAP** ಯೋಜನೆಯನ್ನು ಮುಂದುವರಿಸಲು ಈಗ ನಮಗೆ ಸುಮಾರು 8.5 ಕೋಟಿ ರೂ.ಗಳಷ್ಟು ಮೊತ್ತ ಅಗತ್ಯವಾಗಿದೆ. 2014-15ನೇ ಸಾಲಿನ **GAP** ಯೋಜನೆಯನ್ನು ನಡೆಸಲು ಈ ಮೊತ್ತವನ್ನು **ಈ ಕೂಡಲೇ** ಸಂಗ್ರಹಿಸಬೇಕಾಗಿದೆ. ಆದ್ದರಿಂದ ಈ ಶ್ರೇಷ್ಠ ಕಾರ್ಯದಲ್ಲಿ ನೆರವಾಗಲು ತಾವು ಮುಂದೆ ಬಂದು, ಇದಕ್ಕೆ ಉದಾರ ಆರ್ಥಿಕ ನೆರವು ನೀಡಬೇಕೆಂದು ನಿಮ್ಮನ್ನು ಹಾಗೂ ಇನ್ನಿತರ ಸೇವಾಸಕ್ತರನ್ನು ನಾವು ವಿನಂತಿಸಿಕೊಳ್ಳುತ್ತಿದ್ದೇವೆ. ಬಡ ಮಕ್ಕಳ ಸೇವೆಗಾಗಿ ಈ ಕಾರ್ಯದಲ್ಲಿ ನೆರವಾಗಲು ಸಾರ್ವಜನಿಕ ಹಾಗೂ ಖಾಸಗಿ ಸೇವಾಸಂಸ್ಥೆಗಳನ್ನೂ ನಾವು ಆಹ್ವಾನಿಸುತ್ತಿದ್ದೇವೆ.

ದಯವಿಟ್ಟು **GAP** ಗಾಗಿ ನೀಡುವ ಹಣ (ಕ್ಯಾಶ್), ಚೆಕ್, ಡಿಡಿ ('**Ramakrishna Mission**' ಹೆಸರಿನಲ್ಲಿ, ಕೊಲ್ಕತ್ತ ಶಾಖೆಯ ಪರವಾಗಿ ತೆಗೆದಿರಬೇಕು) ಇವುಗಳೊಂದಿಗೆ ದೇಣಿಗೆ ನೀಡುವ ಉದ್ದೇಶವನ್ನು ಬರೆದು, ರಾಮಕೃಷ್ಣ ಮಿಷನ್ನಿನ ಪ್ರಧಾನ ಕಾರ್ಯದರ್ಶಿಯವರ ಮೇಲಿನ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ. ಈ ದೇಣಿಗೆಗಳಿಗೆ 1961ರ I.T. Act ನ 80 G (5) (vi) ಸೆಕ್ಷನ್ ಅನ್ವಯ ಆದಾಯ ತೆರಿಗೆ ವಿನಾಯಿತಿ ಇರುತ್ತದೆ. ದೇಣಿಗೆಗಳು **GAP** ಯೋಜನೆಯನ್ನು ನಡೆಸಿಕೊಂಡು ಹೋಗಲು ಅನುಕೂಲವಾಗುವಂತೆ **Corpus Fund** ರೂಪದಲ್ಲಿ ಇರಬಹುದು; ಅಥವಾ ವಾರ್ಷಿಕವಾಗಿ **Running Expenses** ರೂಪದಲ್ಲಿಯೂ ಇರಬಹುದಾಗಿದೆ.

ತಮ್ಮಿಂದ ಸೂಕ್ತ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತ,

15 ಫೆಬ್ರುವರಿ, 2015

ನಿಮ್ಮ ವಿಶ್ವಾಸಿ,

**(ಸ್ವಾಮಿ ಸುಹಿತಾನಂದ)**
ಪ್ರಧಾನ ಕಾರ್ಯದರ್ಶಿ

# ಸ್ತ್ರೀಶಿಕ್ಷಣಕ್ಕಾಗಿ ಸೇವೆ ಸಲ್ಲಿಸಲು ಸದಾವಕಾಶ



'ನಿಮ್ಮ ಸ್ತ್ರೀಯರಿಗೆ ಮೊದಲು ಶಿಕ್ಷಣ ನೀಡಿ. ಉಳಿದುದನ್ನೆಲ್ಲ ಅವರೇ ನೋಡಿಕೊಳ್ಳಲಿ.' *-ಸ್ವಾಮಿ ವಿವೇಕಾನಂದ*

ಹಲವು ದಶಕಗಳಿಂದ ಶ್ರೀರಾಮಕೃಷ್ಣ ಮಠ, ಮೈಲಾಪುರ, ಚೆನ್ನೈ, ಈ ಕೆಳಗಿನ ಎರಡು ವಿದ್ಯಾಲಯಗಳನ್ನು ನಡೆಸುತ್ತಿದೆ:

**1. ಶ್ರೀರಾಮಕೃಷ್ಣ ಮಠ ನ್ಯಾಷನಲ್ ಸ್ಕೂಲ್, ಬೇಸಿನ್ ಬ್ರಿಡ್ಜ್ ರೋಡ್, ಮಿಂಟ್, ಚೆನ್ನೈ.**

ಶ್ರೀರಾಮಕೃಷ್ಣರ ನೇರ ಶಿಷ್ಯರಾದ ಸ್ವಾಮಿ ರಾಮಕೃಷ್ಣಾನಂದರು ಈ ಶಾಲೆಯನ್ನು 1906ರಲ್ಲಿ ಆರಂಭಿಸಿದರು. ಇಂದು ಈ ಶಾಲೆಯಲ್ಲಿ 370 ಮಂದಿ ವಿದ್ಯಾರ್ಥಿ, ವಿದ್ಯಾರ್ಥಿನಿಯರು 1ರಿಂದ 5ನೇ ತರಗತಿಯವರೆಗೆ ಕಲಿಯುತ್ತಿದ್ದಾರೆ. ವಿವರಗಳಿಗೆ ವೆಬ್‌ಸೈಟ್ ನೋಡಿ: **www.rkmns.edn.in**

**2. ಶ್ರೀ ರಾಮಕೃಷ್ಣ ಮಠ ವಿವೇಕಾನಂದ ಸೆಂಟಿನರಿ ಗರ್ಲ್ಸ್ ಹೈಯರ್ ಸೆಕೆಂಡರಿ ಸ್ಕೂಲ್, ಸರವಣ ಸ್ಟ್ರೀಟ್, ಮಿಂಟ್, ಚೆನ್ನೈ - 79.**



1962 ರಲ್ಲಿ ಆರಂಭವಾದ ಈ ಶಾಲೆಯಲ್ಲಿ 900 ಮಂದಿ ಹೆಣ್ಣುಮಕ್ಕಳು 6ರಿಂದ 12ನೇ ತರಗತಿಯವರೆಗೆ ಕಲಿಯುತ್ತಿದ್ದಾರೆ. ವೆಬ್‌ಸೈಟ್ ನೋಡಿ : **www.rkmvcs.edu.in.**

ಚೆನ್ನೈ ನಗರದ ಉತ್ತರ ಭಾಗದಲ್ಲಿ ಹಿಂದುಳಿದ ಪ್ರದೇಶದಲ್ಲಿರುವ ಈ ಶಾಲೆಗಳಲ್ಲಿ ಶೇಕಡಾ 85ಕ್ಕಿಂತ ಮಂದಿ ವಿದ್ಯಾರ್ಥಿ - ವಿದ್ಯಾರ್ಥಿನಿಯರು ಬಡತನ ರೇಖೆಗಿಂತ ಕೆಳಗಿನ ವರ್ಗದಿಂದ ಬಂದವರು. ಈ ವಿದ್ಯಾರ್ಥಿಗಳಿಗೆ ಆರ್ಥಿಕ ಹಾಗೂ ಇನ್ನಿತರ ಸೌಲಭ್ಯಗಳನ್ನು ಕಲಿಸುವ ಸಲುವಾಗಿ, ಪೀಠೋಪಕರಣಗಳನ್ನು ನವೀಕರಿಸುವ ಸಲುವಾಗಿ ನಾವು ಅತಿಶೀಘ್ರವಾಗಿ ಗಮನ ಹರಿಸಬೇಕಾಗಿದೆ.

ಆದ್ದರಿಂದ ಈ ಮಹತ್ಕಾರ್ಯದಲ್ಲಿ ಉದಾರವಾಗಿ ನೆರವು ನೀಡಲು, ನಾವು ಸದಾಶಯವುಳ್ಳ , ಹಿತೈಷಿಗಳಾದ ನಾಗರಿಕರಿಗೂ, ಸೇವಾಸಂಸ್ಥೆಗಳು ಹಾಗೂ ದೇಣಿಗೆ ನೀಡುವ ಸಂಘಗಳಿಗೂ, ವಿಶೇಷವಾಗಿ ಸಾಮಾಜಿಕ ಜವಾಬ್ದಾರಿ ಹೊಂದಿರುವ ವಾಣಿಜ್ಯ ಸಂಸ್ಥೆಗಳ (Business Houses) ಕಾರ್ಪೋರೇಟ್ ಡಿಪಾರ್ಟ್‌ಮೆಂಟ್‌ಗಳಿಗೂ ವಿನಂತಿಸಿಕೊಳ್ಳುತ್ತಿದ್ದೇವೆ.

ಚೆಕ್/ಡಿ.ಡಿ.ಗಳನ್ನು ದಯವಿಟ್ಟು **'Sri Ramakrishna Math National School'** ಅಥವಾ **'Sri Ramakrishna Math Vivekananda Centenary Girls' Higher Secendary School'** ಈ ಹೆಸರಿನಲ್ಲಿ ತೆಗೆದು ನಮ್ಮ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ. ಕಳುಹಿಸುವಾಗ ನಿಮ್ಮ ಹೆಸರು, ಪೂರ್ಣ ಅಂಚೆ ವಿಳಾಸ, ಫೋನ್ ಸಂಖ್ಯೆ, ಇಮೇಲ್ **ID** ಹಾಗೂ **PAN** ಸಂಖ್ಯೆಗಳನ್ನು ನಮೂದಿಸಲು ಕೋರುತ್ತೇವೆ.

Sri Ramakrishna Math National School

1000/- ರೂ. ಗಿಂತ ಹೆಚ್ಚಿನ ಮೊತ್ತದ ದೇಣಿಗೆಗಳನ್ನು ನಮ್ಮ **Endowment Fund** ಗೆ ಸೇರಿಸಲಾಗುವುದು.

ಎಲ್ಲ ದೇಣಿಗೆಗಳನ್ನೂ (ಅವೆಷ್ಟೇ ಚಿಕ್ಕದಿರಲಿ) ಕೃತಜ್ಞತಾಪೂರ್ವಕ ಸ್ವೀಕರಿಸಲಾಗುವುದು, ಹಾಗೂ ಅವುಗಳ ಸ್ವೀಕೃತಿ ಪತ್ರವನ್ನು ಕಳುಹಿಸಲಾಗುವುದು.

**ವಿಳಾಸ : Sri Ramakrishna Math, No. 31, Ramakrishna Math Road, Mylapore, Chennai – 600 004**
ಮಾಹಿತಿಗೆ ಸಂಪರ್ಕಿಸಿ: **ಸ್ವಾಮಿ ವಿಮೂರ್ತಾನಂದ, ಮ್ಯಾನೇಜರ್** ಅಥವಾ **ಸ್ವಾಮಿ ಶ್ರೀವಿದ್ಯಾನಂದ, ಶಾಲೆಯ ಸೆಕ್ರೆಟರಿ,** ಫೋನ್ ನಂ: **09445738065**
ಇಮೇಲ್: **secretary@rkmns.edu.in** ಮತ್ತು **secretary@rkmvcs.edu.in**

**ಶ್ರೀರಾಮಕೃಷ್ಣ ಮಠಕ್ಕೆ ನೀಡುವ ಎಲ್ಲ ದೇಣಿಗೆಗಳೂ ಆದಾಯ ತೆರಿಗೆ ಕಾಯ್ದೆಯ 80G ಸೆಕ್ಷನ್ ಅನ್ವಯ ತೆರಿಗೆ ವಿನಾಯಿತಿಗೆ ಅರ್ಹವಾಗಿರುತ್ತದೆ.**

ಇತಿ ಭಗವತ್ಸೇವೆಯಲ್ಲಿ ತಮ್ಮ,
**ಸ್ವಾಮಿ ಗೌತಮಾನಂದ,** ಅಧ್ಯಕ್ಷರು



SRKMath Vivekananda Centenary Girls' Hr Sec. School

ಎಲ್ಲ ದೇಣಿಗೆಗಳನ್ನು ನೀವು **NEFT/CTGS** ವರ್ಗಾವಣೆಯ ಮೂಲಕ ನೇರವಾಗಿ ಕಳುಹಿಸಿ, ನಮಗೆ **PAN** ವಿವರಗಳೊಂದಿಗೆ ಇಮೇಲ್ ಮೂಲಕ ತಿಳಿಸಬಹುದಾಗಿದೆ.ಬ್ಯಾಂಕ್ ಮೂಲಕ ವರ್ಗಾವಣೆಗೆ ಅಗತ್ಯವಾದ ಮಾಹಿತಿಗಳು:

**Sri Ramakrishna Math National School**
Bank and Branch: SBBJ (State Bank of Bikaner & Jaipur)
Mylapore Br. Chennai -600004
Account No: 61003734105; IFSC : SBBJ0010419

**SRKM Vivekananda Centenary Girls' Higher Secondary School**
Bank and Branch : CB.Canara Bank, Mandaveli Br., Chennai-28
Account No: 8636101036893; IFSC : CNRB0000937

Managing Editor : Swami Muktidananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

VIVEKA PRABHA (KANNADA MONTHLY)
April 2015, Vol.16, No.02, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/ 2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore